ಪಂಚಮ

ಸಂಪುಟ : 1 ಬಾನುವಾರ, 5-೯-1976 ಬೆಲೆ : 20 ಪೈಸೆ ಸಂಚಿಕೆ : 5

# ಹರಿಜನ ವಿದ್ಯಾರ್ಥಿಯ ಭೀಕರಸಾವು

## ತನಿಖೆಗೆ ತಾಯಿ ಮತ್ತು ಸೋದರರ ಮನವಿ

ಇತ್ತೀಚೆಗೆ ಬೆಂಗಳೂರು ಪಕ್ಕದ ರಾಮನಗರಂ ತಾಲ್ಲೂಕಿನ ಜಕ್ಕನಳ್ಳಿಯ ಹರಿಜನ ವಿದ್ಯಾರ್ಥಿಯೊಬ್ಬ ಅಸಹಜ ರೀತಿಯಲ್ಲಿ ಸಾ ಗೀಡಾಗಿದ್ದಾನೆ. ಪೋಲೀಸ್ ವರದಿ ಪ್ರಕಾರ ಇದು 'ಆತ್ಮಹತ್ಯೆ' ಎಂದು ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಆದರೆ 'ಆತ್ಮಹತ್ಯೆ' ಸುಳ್ಳೆಂದೂ, ಅದೊಂದು ಭೀಕರ ಕೊಲೆಯೆಂದು ಹೇಳಿ ವಿದ್ಯಾರ್ಥಿಯ ತಾಯಿ ಮತ್ತು ಸೋದರರು ನ್ಯಾಯ ದೊರಕಿಸಬೇಕೆಂದು ಮುಖ್ಯಮಂತ್ರಿ ಮುಂತಾದವರಿಗೆ ಮನವಿ ಮಾಡಿಕೊಂಡಿದ್ದಾರೆ ಮನವಿ ಪತ್ರದ ಪೂರ್ತಿ ಪಾಠ ಕೆಳಕಂಡ ಂದೆ:



ಸಾವಿಗೀಡಾದ ವಿದ್ಯಾರ್ಥಿ ಶಿವಮೂರ್ತಿ

ರಾಮನಗರಂ ತಾಲ್ಲೂಕು ಕೈಲ_ಚ ಹೋಬಳಿ ಜಕ್ಕನಳ್ಳಿ ಗ್ರಾಮದ ನಿವಾಸಿ ಆದಿ ಕರ್ನಾಟಕ ಜಾತಿಗೆ ಸೇರಿದ ಲೇಟ್ ಕಟಕಯ್ಯನ ಹೆಂಡತಿ ಸಿದ್ದಮ್ಮ ಮತ್ತು ನನ್ನ ಮಕ್ಕಳಾದ ರಾಮು ಮತ್ತು ಬೋರಯ್ಯ ಬರೆದು ಕೊಂಡ ಅರ್ಜಿ:–

ತಾ : 16. 7. 76 ನೇ ಶುಕ್ರವಾರ ರಾತ್ರಿ ಸುಮಾರು 1–30ರಿಂದ 2 ಗಂಟೆ ಸಮಯದಲ್ಲಿ ಜಕ್ಕನಳ್ಳಿ ಗ್ರಾಮದಲ್ಲಿ ವಾಸವಾಗಿರುವ ಚನ್ನಂಕೆಜೊಡೇ ಗೌಡನ ಮಗ ಭದ್ರೆಗೌಡ 2) ಮಾದೇಗೌಡ ನಿಂಗಯ್ಯನ ಮಗ ಮಾದ 3) ರಾಮಲಿಂಗಯ್ಯನ ಮಗ ವಿಷಕಂಠ 4) ಕಾಳೇಗೌಡ 5) ಕುಂಬಾರ್ ತಿಮ್ಮಯ್ಯ ಇವರುಗಳು ನಮ್ಮ ಹರಿಜನ ಕೇರಿಗೆ ಬಂದು (ನಮ್ಮ ಮನೆಗೆ) ಶಿವಮೂರ್ತಿ ನಿನ್ನ ಮಗ ಇದೇ ಊರಿನಲ್ಲಿ ವಾಸವಾಗಿರುವ ಎಂ. ಎಲ್. ಎ. ಬಿ. ಪುಟ್ಟಸ್ವಾಮಯ್ಯನ ಮನೆಯಲ್ಲಿ ಕಳವು ಮಾಡಲು ಬಂದು, ಹೊಡೆದು ಕಟ್ಟಕ್ಕಿರುತ್ತಾರೆ. ಎಂ. ಎಲ್. ಎ ಈ ಮೇಲ್ಕಂಡ ವಿಷಯದಲ್ಲಿ ನಿಮ್ಮನ್ನು ಕರೆದುಕೊಂಡುಬರಲು ಹೇಳಿದರು ಬನ್ನಿ ಎಂದು ಕರೆದರು. ಇದಕ್ಕೆ ನಾನು ಮತ್ತು ನನ್ನ ಮಗ ರಾಮಯ್ಯ, ದೊಡ್ಡ ವೆಂಕಟಯ್ಯ, ಸುಬ್ಬನ ವೆಂಕಟಯ್ಯ, ಚಿಕ್ಕವೆಂಕಟಯ್ಯನ ಮಗ ಸುಬ್ಬಣ್ಣ ಎಂ. ಎಲ್. ಎ ಯವರ ಮನೆಗೆ ಹೋದೆವು. ನನ್ನ ಮಗನನ್ನು ಕಂಬಕ್ಕ ಕಟ್ಟಿ ಹಾಕಿದ್ದರು. ನನ್ನ ಮಗ ಹಾಕಿಕೊಂಡಿದ್ದ ಬಟ್ಟೆ ಯೆಲ್ಲವು ರಕ್ತಮಯವಾಗಿತ್ತು. ಯಾಕೆ ಈ ರೀತಿ ಮಾಡುತ್ತೀರಿ ಎಂದು ನಾನು ಕೇಳಿದಕ್ಕೆ ನಮ್ಮ ಮನೆಗೆ ಕಳ್ಳತನಕ್ಕೆ ಬಂದಿದ್ದ ಅದಕ್ಕೆ ಹೊಡೆದು ಕಟ್ಟಿ ಹಾಕಿದ್ದೇವೆ ಎಂದು ಚಂದ್ರೇಗೌಡ ಹೇಳಿದರು. ನಾವು ನಮ್ಮ ಮಗನನ್ನು ಕರೆದುಕೊಂಡು ನಮ್ಮ ಮನೆಗೆ ಬಂದೆವು. ಮನೆಗೆ ಬಂದು ನನ್ನ ಮಗನ ದೇಹವನ್ನು ನೋಡಿದಾಗ ಬಲಗಡೆ ಕಿವಿ ಹಿಂಭಾಗದಲ್ಲಿ ಚಾಕಿನಿಂದ ತಿವಿದ ಏಟು ಮತ್ತು ಬಲಗಾಲಿನಲ್ಲಿ ರಕ್ತ ವಿಪರೀತವಾಗಿ ಸೋರುತಿತ್ತು. ನಾವು ನನ್ನ ಮಗನನ್ನು ಏತಕ್ಕೆ ಕಳ್ಳತನ ಮಾಡುವುದಕ್ಕೆ ಹೋಗಿದ್ದೆ ಎಂದು ಕೇಳಿದ್ದಕ್ಕೆ 'ನಾನು ಕಳ್ಳತನಕ್ಕೆ ಹೋಗಿರಲಿಲ್ಲ. ಈ ದಿನ ನಮ್ಮ ಅಣ್ಣ ಯಾರೂ ಸಹ ಇರುವುದಿಲ್ಲ ನಮ್ಮ ಅಣ್ಣ ನಾಟಕಕ್ಕೆ ಹೋಗುತ್ತಾರೆ, ನಮ್ಮ ಮನೆಗೆ ಸಾಯಂಕಾಲ ಬಾ ಎಂದು ಬಿ. ಪುಟ್ಟಸ್ವಾಮಯ್ಯನವರ ಎರಡನೆ ಮಗಳು ನಾಗರತ್ನ ಹೇಳಿದಳು.

ಇದೇ ಸಂಜೆ ಇವಳ ಮಾತಿನಂತೆ ಹೋಗಿ ಇವಳ ರೂಂನಲ್ಲಿ ಇವಳ ಜೊತೆಯಲ್ಲಿ ಇದ್ದೆ. ಸುಮಾರು 12–30 ವೇಳೆಯಲ್ಲಿ ಹೋಗುತ್ತೇನೆಂದು ಇವಳಿಗೆ ಹೇಳಿ ಹೊರಟೆ. ನಮ್ಮ ಅಣ್ಣನವರಿಗೆ ನಾಟಕದಲ್ಲಿ ಅಧ್ಯಕ್ಷ ಭಾಷಣವಿದೆ; ಆದ್ದರಿಂದ ಇವರು ತುಂಬಾ ಲೇಟಾಗಿ ಬರುತ್ತಾರೆ. ಯಾವ ಚಿಂತೆಯೂ ಇಲ್ಲದೆ ಮಲಗಿಕೊಳ್ಳಿ ಎಂದು ಹೇಳಿದಳು. ಆದರೆ ನನಗೆ ತುಂಬಾ ನಿದ್ರೆ ಬಂದು ಮಲಗಿ ಬಿಟ್ಟೆ. ಸ್ಕೂಟರ್ ಶಬ್ದವಾಯಿತು, ನನ್ನನ್ನು ಎಬ್ಬಿಸಿದಳು. ಎದ್ದು ಮನೆಯಿಂದ ಈಚೆಗೆ ಬಂದೆ. ಅಷ್ಟರಲ್ಲಿ ಚಂದ್ರೇಗೌಡ ಮತ್ತು ಈತನ ತಮ್ಮ ಗುರುವನ್ನು ಕೂಗಿಕೊಂಡು ಚಾಕು ತೆಗೆದುಕೊಂಡು ಬಾರೋ ಈ ಸೂಳೆ ಮಗನನ್ನು ಮತ್ತು ಈ ಹೊಲೆಯನನ್ನು ಇಲ್ಲಿಯೇ ಮುಗಿಸಿ ಬಿಡೋಣ ಎಂದು ಬಹಳವಾಗಿ ಹೊಡೆದರು. ಈ ಮೇಲ್ಕಂಡವರ ಸಹಾಯದಿಂದ ನನ್ನನ್ನು ಕಂಬಕ್ಕೆ ಕಟ್ಟಿಹಾಕಿದರು." ನಾನು ಈ ವಿಷಯವನ್ನು ನನ್ನ ಮಗನಿಂದ ತಿಳಿದು ನಾನು ತುಂಬಾ ಭಯಪಟ್ಟಳಾಗಿ, ಮತ್ತೆ ಬಂದು ಮನೆಗೆ ನುಗ್ಗಿ ಹೊಡೆದಾರೂ ಎಂದು ನನ್ನ ಇನ್ನೊಬ್ಬ ಮಗ ರಾಮು ನನ್ನು ಜೊತೆಮಾಡಿ ರಾತ್ರೋರಾತ್ರಿ ನಮ್ಮ ನೆಂಟರಮನೆ ಅಪ್ಪಕೆರೆಗೆ ಕಳುಹಿಸಿ ಕೊಟ್ಟೆ. ತಾ. 17–7–76ನೇ ಶನಿವಾರದ ಬೆಳಿಗ್ಗೆ ಅಪ್ಪಕೆರೆಯಿಂದ ಬೆಂಗಳೂರಿಗೆ ಬಂದ. ನಂತರ ತಾ : 19-7-76ನೇ ಸೋಮವಾರ ನನ್ನ ಮಗ ರಾಮು ದನಗಳನ್ನು ಕಟ್ಟಿಹಾಕಲು ಹೋದಾಗ ನನ್ನ ಹಿತ್ತಲಿನ ಚುಜ್ಜಲಿ ಮರಕ್ಕೆ ನೇಣು ಹಾಕಿದ್ದು ನೋಡಿದ. ನನಗೆ ಸುಮಾರು 8ಗಂಟೆ ಸಮಯಕ್ಕೆ ಎಂ. ಎಲ್. ಎ ಯವರ ತಮ್ಮ ಬಿ. ಈಶ್ವರಯ್ಯ ಎಂ. ಎಲ್. ಎ. ತಂಗಿ ಮಗ ಕಾಂತರಾಜ್ ವೆಗ್ಯೆರೆಗಳು ಬಂದು, ನಿನ್ನ ಖರ್ಚು ವೆಚ್ಚಗಳಿಗೆ ಹಣ ಸಹಾಯ ಮಾಡುತ್ತೇವೆ ಎಂದು ಹೇಳಿದರು. ಮತ್ತು ನನ್ನ ಮಗನ ಶವವನ್ನು ಸುಡಲು ಇವರ ಹಿತ್ತಲಿನಿಂದ ಸೌದೆಯನ್ನು ತರಿಸಿ ಹಾಕಿದರು. ಇವರ ಮಾತುಗಳಿಗೆ ಒಪ್ಪದೆ ರಾಮನಗರಂ ಪೋಲೀಸ್‌ಗೆ ತಿಳಿಸಿದೆ. ಈಮೇಲ್ಕಂಡಂತೆ ಪೋಲೀಸ್‌ನವರಿಗೆ ಹೇಳಿಕೆ ಕೊಟ್ಟಿದ್ದೇನೆ. ನಂತರ ನಾಗರತ್ನ ನನ್ನ ಮಗನಿಗೆ ಬರೆದ ಪ್ರೇಮಪತ್ರಗಳನ್ನು ನನ್ನ ಮಗ ರಾಮನು ಇದೇ ಗ್ರಾಮದಲ್ಲಿ ವಾಸವಾಗಿರುವ ಕಾಲೇಜ್ ವಿದ್ಯಾರ್ಥಿಗಳಾದ ಕಾಡಯ್ಯನ ಮಗ ಬೋರಯ್ಯ ಮತ್ತು ದೊಡ್ಡ ವೆಂಕಟಯ್ಯನ ಮಗ ವೆಂಕಟೇಶ, ವಗೈರೆರವರುಗಳು ಓದಿ, ಸಬ್ ಇನ್ಸ್‌ಪೆಕ್ಟರ್ ಸಾಹೇಬರ ಕೈಯಲ್ಲಿ ಕೊಟ್ಟರು. ಇದುವರೆಗೂ ಸಹ ಏನು ಕ್ರಮ ಕೈಗೊಳ್ಳಲಿಲ್ಲ. ಎಂ. ಎಲ್. ಎ ಯವರ ಪ್ರಭಾವದಿಂದ ಏನೂ ಆಗುತ್ತಿಲ್ಲ. ಸದರೀ ಎಂ. ಎಲ್. ಎಯು ಬನ್ನಿಕುಪ್ಪೆ ಗ್ರಾಮದ ಎ. ಕೆ. ಲಾಲೋನಿಗೆ ಬಂದು ನನ್ನ ಸ್ವಾಟವನ್ನು ಇಡೀ ದೇಶದಲ್ಲಿ ಯಾರೂ ಕೇಳಲು ಸಾಧ್ಯವಿಲ್ಲ' ಎಂದು ಹೇಳಿದರು.

(ಕೊನೇ ಪುಟಕ್ಕೆ)

# ಹೆಗ್ಗೂರು ಸವರ್ಣೀಯರ ವರ್ಣರಾಜಕೀಯ

ಎಲ್ಲಾ ಇವರೇ. ಇರುವ ಎರಡು ಹೋಟೆಲುಗಳಲ್ಲಿ ಬೆಳಗು ಸಂಜೆ ವ್ಯಾಪಾರಕ್ಕಾಗಿ, ಕಾಫಿ ತಿಂಡಿಗಾಗಿ ಮುತ್ತುವವರು ಬರೀ ಇವರೆ – ಹರಿಜನರು. ಏಕೆಂದರೆ ಈ ಎರಡು ಹೋಟೆಲುಗಳು ಇವರ ಕೇರಿಯಲ್ಲೇ ಇವೆ. ಇವರ ಕೇರಿಯೆಂದರೆ ಕರೆದವರ ಮನೆಯಲ್ಲಿ, ಗದ್ದೆ ಹೊಲಗಳಲ್ಲಿ ಹೇಳಿದಷ್ಟು ಕೂಲಿಗೆ ದುಡಿದು ದುಡಿದು ಹಣ್ಣಾಗುವ ಕೂಲಿಕಾರರ ಕೇರಿ. ಬೆಳಿಗ್ಗೆ ತಂಗಳುಳಿಯದಿದ್ದರೆ ಇಲ್ಲಾ ಹಿಟ್ಟಾಗುವುದು ಒತ್ತಾದರೆ, ಅಂತೂ ತಮ್ಮ ಗೌಡ, ಒಡೆಯ "ಇದ್ಯಾಕ್ರಲಾ ಇಷ್ಟೊತ್ತು" ಎಂದು ಗದರಿಸುವುದರಿಂದ ತಪ್ಪಿಸಿಕೊಳ್ಳಲಿಕ್ಕಾಗಿ ಹರಿಜನರೆಲ್ಲ ಈ ಎರಡು ಹೋಟೆಲುಗಳಿಗೆ ನುಗ್ಗಿ ಬೆಳಿಗ್ಗೆ ಸಂಜೆ ಈ ಹೋಟೆಲುಗಳು ಗಿಜಗುಟ್ಟುತ್ತವೆ. ಆಗಾಗ ಒಬ್ಬಿಬ್ಬರನ್ನು ಬಿಟ್ಟರೆ ಈ ಹೋಟೆಲುಗಳಿಗೆ ಬರುವವರು ಹೋಗುವವರು ಎಲ್ಲರೂ ಹರಿಜನರೇ. ಆದರೆ ಈ ಹೋಟೆಲುಗಳಲ್ಲಿ ಕಾಫಿ ಇತ್ಯಾದಿ ಕಾಯಿಸುವವರು, ಗಲ್ಲಾದ ಮೇಲೆ ಕೂತು ದುಡ್ಡೆಣಿಸಿಕೊಳ್ಳುವವರು ಮಾತ್ರ ಬೇರೆಯವರು. ಇವರು ಮೇಲ್ಜಾತಿಯವರು. ಈ ಕಾರಣಕ್ಕಾಗೇ ಗಿಜಗುಟ್ಟುವ ಹರಿಜನರ ಒಂದು ನಿರ್ಧಿಷ್ಟ ಜಾಗಬಿಟ್ಟು ಹೋಟೆಲಿನ ಒಳ ಹೋಗುವಂತಿಲ್ಲ. ಜೊತೆಗೆ ಹೋಟೆಲ ಒಂದು ಮೂಲೆಯಲ್ಲಿ ಬಿಸಾಕಿದ ಲೋಟಗಳ ತಾವೇ ತೊಳಕೊಂಡು ಎತ್ತರದಿಂದ ಉಯ್ಯುವ ಕಾಫಿಗಾಗಿ ಕಾಯುತ್ತಾ ನಡುಬಗ್ಗಿ ನಿಲ್ಲಬೇಕು.

– ಇಂಥವು ಸುಮಾರು ಊರುಗಳಲ್ಲಿ ನಡೆಯುತ್ತಾ ಇದ್ದರೂ, ಈ ರೀತಿ ಈಗಲೂ ನಿಖರವಾಗಿ ನಡೆಯುತ್ತಿರುವುದು ಟಿ. ನರಸೀಪುರ ತಾಲ್ಲೂಕಿನ ಹೆಗ್ಗೂರಿನಲ್ಲಿ (ಮೈಸೂರು ಜಿಲ್ಲೆ). ಸುಮಾರು ಮುನ್ನೂರಕ್ಕೂ ಮಿಕ್ಕಿ ಸವರ್ಣೀಯರ ಮನೆಗಳಿರುವ ಹೆಗ್ಗೂರಿನಲ್ಲಿ ಹರಿಜನರವು ಬರೀ ಐವತ್ತರವತ್ತು ಅಷ್ಟೆ. ಹರಿಜನರ ಕೇರಿ ಸವರ್ಣೀಯರ ಕೇರಿಯಿಂದ ಸುಮಾರು ಒಂದು ಫರ್ಲಾಂಗಿನಷ್ಟು ದೂರ ಹೊರಗಿದ್ದು ಎರಡಕ್ಕೂ ಮಧ್ಯೆ ಮುಳ್ಳುಬೇಲಿಯ ಓಣಿ ಇದೆ.

ಮೆಜಾರಿಟಿ ಇರುವ ಸವರ್ಣೀಯರು ಈ ಊರಲ್ಲಿ ಆಡಿದ್ದೇ ಆಟ. ಇವರ ಆಟದ ಬೊಂಬೆಗಳು ಹರಿಜನರು. ಇವರ ಕೇರಿಯೊಳಗೆ ತಲೆತಗ್ಗಿಸಿ ನಡೆಯಬೇಕು. ಪಂಚೆ, ಪ್ಯಾಂಟು ಹಾಕಿ ಕೇರಿ ನುಗ್ಗುವಂತಿಲ್ಲ. ಚಪ್ಪಲಿಯಂತು ಹಾಕುವಂತೆಯೇ ಇಲ್ಲ. ಓದಿದ ಹರಿಜನ ಹುಡುಗರು ಸವರ್ಣೀಯರ ಕೇರಿಯ ಮಧ್ಯೆ ಬರುವಾಗ ಮಾಡುವುದು ಇಷ್ಟು: 'ಹಾಕಿದ ಪ್ಯಾಂಟನ್ನು ಕಳಚಿ ಅವುಚಿಕೊಂಡಿರುತ್ತಾರೆ. ಕೇರಿ ಮುಗಿದು ದೊಡ್ಡ ರಸ್ತೆ ಸಿಕ್ಕಿದ ಮೇಲೆ ಪ್ಯಾಂಟು ಹಾಕಿಕೊಳ್ಳುತ್ತಾರೆ'.

– ಹೀಗೆ ಸವರ್ಣೀಯರು ತಮ್ಮ ದಬ್ಬಾಳಿಕೆಯನ್ನು ಹರಿಜನರ ಮೇಲೆ ಸಾಕಷ್ಟು ಹಬ್ಬಿಸಿದ್ದಾರೆ. ಅಂತೆಯೇ ಇವುಗಳಲ್ಲಿ ಇನ್ನೊಂದು – ಹೋಟೆಲುಗಳ ವಿಚಾರ: ಊರಿನ ಎಲ್ಲವನ್ನೂ ಹಿಡಿದುಕೊಂಡಿರುವಂತೆ ಈ ಊರಲ್ಲಿರುವ ಹೋಟೆಲುಗಳೆಲ್ಲ ಸವರ್ಣೀಯರ ಕೈಯಲ್ಲಿವೆ. ಹರಿಜನರನ್ನು ನಾಯಿಗಳಂತೆ ಕಾಣುವ ಸವರ್ಣೀಯರು ತಮ್ಮ ಕೇರಿಯಿಂದ ಫರ್ಲಾಂಗು ದೂರ ಬಂದು ಹರಿಜನರ ಕೇರಿಯಲ್ಲಿ ಎರಡು ಹೋಟೆಲು ಸ್ಥಾಪಿಸಿದ್ದಾರೆ. ಹರಿಜನರಿಲ್ಲದೆ ನಡೆಯಲಾರದ ಈ ಹೋಟೆಲುಗಳಲ್ಲಿ ಹರಿಜನರ ಪೂರ್ತ ಶೋಷಣೆ ನಡೆಯುತ್ತದೆ. ಗಿರಾಕಿಗಳೆಲ್ಲ ತಾವೇ ಆದರೂ ಹರಿಜನರು ಒಂದು ನಿರ್ಧಿಷ್ಟ ಜಾಗಬಿಟ್ಟು ಹೋಟೆಲ ಒಳ ಹೋಗುವಂತಿಲ್ಲ. ಮೇಲಿಂದ ಉಯ್ಯುವ ಕಾಫಿನೀರಿಗೆ ತಾವೇ ತೊಳಕೊಂಡ ಲೋಟಗಳ ಹಿಡಿದು ನಡುಬಗ್ಗಿ ನಿಲ್ಲುವ ಪ್ರಸಂಗ. – ಇದೆಲ್ಲ ಗೊತ್ತಿರುವ ಹರಿಜನರು ತಾವೇ ಹೋಟೆಲಿಡಬಹುದು. ಆದರೆ ಈ ಕಾರಣಕ್ಕೆ ಸವರ್ಣೀಯರನ್ನೆಲ್ಲಾ ಎದುರಿಸಬೇಕಾಗುತ್ತದೆ ಎನ್ನುವ ಭಯ ಇವರಿಗೆ. ಹೀಗಾಗಿ ಮೇಲ್ಜಾತಿಯವರ ದಬ್ಬಾಳಿಕೆಯನ್ನು ಹಾಗೆಯೇ ಅನುಭವಿಸುತ್ತಿದ್ದಾರೆ.

ಆಶ್ಚರ್ಯವೆಂದರೆ ಇಷ್ಟೆಲ್ಲ ಆಗುತ್ತಿರುವುದು ಈಗ! ಎಮರ್ಜನ್ಸಿ ಇರುವಾಗ! 20 ಅಂಶ ಕಾರ್ಯಕ್ರಮ ಜಾರಿಯಲ್ಲಿರುವಾಗ? ಇವುಗಳ ಬಿಸಿಯನ್ನೂ ತಾಗಿಸಿಕೊಳ್ಳದೆ ಹಾಗೆಯೇ ನಡೆಯುತ್ತಿರುವ ಸವರ್ಣೀಯರ ಈ ವರ್ಣ ರಾಜಕೀಯ ಅಧಿಕಾರಿಗಳ ಕಣ್ಣಿಗೆ ಬೀಳುವುದು ಯಾವಾಗ?

*

## ದಲಿತ ನುಡಿ

ದಲಿತರ ಅಸ್ಪೃಶ್ಯತಾ ಸಮಸ್ಯೆಯು ಕೇವಲ ಒಂದು ಮಾನಸಿಕ ಗುಲಾಮಗಿರಿ ಮಾತ್ರವಲ್ಲ. ಇದು ಜಗತ್ತಿನ ಶೋಷಣಾ ವೈಖರಿಗಳಂತೆ ಅತ್ಯಂತ ಕ್ರೂರವಾದದ್ದು – ಬದಲಾವಣೆಯಾಗುತ್ತ ನಡೆವ ಅಧಿಕಾರದ ರಚನೆಯೊಳಗೇ ಹುದುಗಿ ನಡೆವಂಥದ್ದು. ಇದರ ಮೂಲ ಬೇರನ್ನು ಇಂದಾದರೂ ಹುಡುಕಬೇಕಾಗಿದೆ. ಇದನ್ನು ನಾವು ಅರ್ಥಮಾಡಿಕೊಂಡರೆ ಈ ಶೋಷಣಾ ರೀತಿಯ ಕತ್ತನ್ನು ಖಂಡಿತವಾಗಿಯೂ ಹಿಚುಕಬಹುದು.

—ದಲಿತಪಾಂಥರ್ ಪ್ರಣಾಳಿಕೆ

# ಪ್ರತಿಕ್ರಿಯೆ

## 'ಅಧಿಕಾರಿಗಳ ಮೌನ'

'ಪಂಚಮ'–3ರಲ್ಲಿ ಮಲಿಯೂರಿನ ಹೋಟೆಲ್ ಮಾಲೀಕ ಮಲ್ಲಿಕಾರ್ಜುನಪ್ಪ, ನಾವು (ಸಂಘದ ಸದಸ್ಯರು) ಹರಿಜನರಾದ ಕಾರಣಕ್ಕೆ ಕಾಫಿ ತಿಂಡಿ ಕೊಡದೆ ಅವಮಾನಿಸಿ ದಬ್ಬಾಳಿಕೆ ನಡೆಸಿದ್ದು ಮತ್ತು ಆ ಬಗ್ಗೆ ಅಧಿಕಾರಿಗಳ ಅಸಡ್ಡೆ, ಇತ್ಯಾದಿ ವಿಷಯವನ್ನು ಪ್ರಕಟಿಸಿದ್ದಕ್ಕೆ ವಂದನೆಗಳು. ಏಕೆಂದರೆ ಅದು ಪ್ರಕಟವಾದ ಕೆಲವೇ ದಿನಗಳಲ್ಲಿ ಟಿ. ನರಸೀಪುರದ ಸಬ್‌ಇನ್ಸ್‌ಪೆಕ್ಟರ್ ಅವರು ನಮ್ಮೂರಿಗೆ ಬಂದು, ಮಲ್ಲಿಕಾರ್ಜುನಪ್ಪನ ಮೇಲೆ ಕ್ರಮ ತೆಗೆದುಕೊಳ್ಳುತ್ತೇವೆಂದೂ, ಈ ಬಗ್ಗೆ ತಿಳಿಸಲು ನಮ್ಮ ವಿಳಾಸಗಳು ಬೇಕೆಂದು ಕೇಳಿ ಬರೆದುಕೊಂಡು ಹೋದರು. ಇದರಿಂದ ನಮಗೆ ನ್ಯಾಯ ದೊರಕಬಹುದೆಂದು ಖುಷಿಗೊಂಡೆವು. ಆದರೆ ದಿನ, ವಾರ, ತಿಂಗಳು ಕಳೆದಂತೆ ನಿರಾಶೆಯಾಯಿತು.

ಈ 'ಅಸ್ಪೃಶ್ಯತೆಯ' ಕೇಸನ್ನು ನಾವು ರಿಜಿಸ್ಟರ್ ಮಾಡಿಸಿ (ತಾ॥ 30.5.76) ಈಗ ಮೂರು ತಿಂಗಳು ಮುಗಿದಿವೆ, ಸಂಬಂದಿಸಿದ ಅಧಿಕಾರಿಗಳಿಂದ ಕ್ರಮ ತೆಗೆದುಕೊಳ್ಳುವ ಯಾವ ಸೂಚನೆಯೂ ಕಾಣುತ್ತಿಲ್ಲ. ಸವರ್ಣಿಯರು ಹರಿಜನರ ಮೇಲೆ ಅಲ್ಲಲ್ಲೆ ನಡೆಸುವ ಹಲ್ಲೆಗಳು, ದೌರ್ಜನ್ಯಗಳು ಯಾವ ರೀತಿ ಕ್ರಮಕ್ರಮವಾಗಿ ಮಾಯವಾಗುತ್ತವೆ ಎನ್ನುವುದಕ್ಕೆ ಇದೊಂದು ದೊಡ್ಡ ಉದಾಹರಣೆ. ಹರಿಜನೋದ್ಧಾರದ ಮಾತಾಡುವ ಮೇಲಧಿಕಾರಿಗಳು' ರಾಜಕಾರಿಣಿಗಳು ಈ ಬಗ್ಗೆ ಕಣ್ಣುಬಿಡುವರೆ... ?

–ಎಂ. ರಂಗಸ್ವಾಮಿ
ಅಧ್ಯಕ್ಷ, ಯುವಕ ಸಂಘ
ಸಿದ್ಧನಹುಂಡಿ, ಟಿ. ನರಸೀಪುರ ತಾ॥

## ನಮ್ಮೆಲ್ಲರ ಪತ್ರಿಕೆ

'ಪಂಚಮ'ದ ನಿಜವಾದ ಉದ್ದೇಶ್ಯವನ್ನು ಅರಿತ ನಾನು ನನ್ನ ಮಿತ್ರರೊಡಗೂಡಿ ಈ ಬಗ್ಗೆ ನಮ್ಮೂರ ಕಡೆ ಸಾಕಷ್ಟು ಪ್ರಚಾರ ಮಾಡುತ್ತಿದ್ದೇವೆ. ನಮ್ಮ ಅಭಿಪ್ರಾಯವೆಂದರೆ ಪಂಚಮ ಪತ್ರಿಕೆಯು ಮಂಡ್ಯದಲ್ಲಿನ ಪ್ರತಿಯೊಂದು ಹರಿಜನ ಕುಟುಂಬಕ್ಕೂ ತಲುಪುವಂತಾಗಬೇಕು. ಈಗಾಗಲೇ ಹಲವಾರು ಕುಟುಂಬಗಳಿಗೆ ವಿದ್ಯಾರ್ಥಿಗಳಿಗೆ ಪಂಚಮ ಪರಿಚಯವಾಗಿದೆ. ಈ ದಿಶೆಯಲ್ಲಿ ನಾವುಗಳು ನಮ್ಮ ಬಿಡುವಿಲ್ಲದ ಕಾರ್ಯಕ್ರಮದ ಜೊತೆಯಲ್ಲೂ ಶ್ರಮಿಸುತ್ತಿದ್ದೇವೆ. ಪಂಚಮ ಪತ್ರಿಕೆಯು ನಮ್ಮ ಪತ್ರಿಕೆ ಎಂದುಕೊಂಡು ಹೆಜ್ಜೆಯಿಡುತ್ತಿದ್ದೇವೆ. ಪಂಚಮದ ಶ್ರೇಯಸ್ಸೇ ನಮ್ಮೆಲ್ಲರ ಶ್ರೇಯಸ್ಸು.

–ಎಂ. ಡಿ. ಜಯರಾಂ ಮತ್ತು ಮಿತ್ರರು
ವಿದ್ಯಾನಗರ, ಮಂಡ್ಯಾ

# ಹರಿಜನ ವಿದ್ಯಾರ್ಥಿ ನಿಲಯದಲ್ಲಿ ಅವ್ಯವಹಾರ :
## ನಿಲಯಪಾಲರ ಅಸಭ್ಯ ವರ್ತನೆ

( ವರದಿ :ನಮ್ಮ ಪ್ರತಿನಿಧಿಯಿಂದ )

ಇತ್ತೀಚೆಗೆ ರಾಜ್ಯದ ಸಮಾಜ ಕಲ್ಯಾಣ ಇಲಾಖೆಯಲ್ಲಿನ ಭ್ರಷ್ಟಾಚಾರ ಬಯಲಿಗೆ ಬಂದಿದ್ದರೂ ಸಹ ಇಲಾಖೆಗೆ ಸಂಬಂಧಿಸಿದ ಸಣ್ಣಪುಟ್ಟ ವಿದ್ಯಾರ್ಥಿ ನಿಲಯಗಳಲ್ಲಿ ಭ್ರಷ್ಟಾಚಾರ ಭದ್ರವಾಗಿ ಬೇರೂರಿದೆ ಎಂಬುದಕ್ಕೆ ಕಳೆದ ವರ್ಷ ಮೈಸೂರಿನ ವಾಣಿವಿಲಾಸ ಪುರಂನಲ್ಲಿ ಹೊಸದಾಗಿಆರಂಭಗೊಂಡ ವಿದ್ಯಾರ್ಥಿನಿಲಯವೇ ಸಾಕ್ಷಿ.

ಅಲ್ಲಿನ ಅವ್ಯವಹಾರ ಮತ್ತು ನಿಲಯಪಾಲರ ದಬ್ಬಾಳಿಕೆಯ ದೂರುಗಳನ್ನು ತಿಳಿದು ನಮ್ಮ ಪ್ರತಿನಿಧಿಗಳು ಅಲ್ಲಿಗೆ ಭೇಟಿ ನೀಡಿ ಅಲ್ಲಿನ ವಿದ್ಯಾರ್ಥಿಗಳನ್ನು ಮತ್ತು ಹಳೆ ವಿದ್ಯಾರ್ಥಿಯೊಬ್ಬರನ್ನು ಸಂದರ್ಶಿಸಿದಾಗ ಬಡ ಹರಿಜನ-ಗಿರಿಜನರ ಸವಲತ್ತುಗಳನ್ನು ದುರುಪಯೋಗ ಪಡಿಸುತ್ತಿರುವುದು ತಿಳಿದು ಬಂತು.

ಕಳೆದ ನವೆಂಬರ್ ತಿಂಗಳಲ್ಲಿ ಪ್ರಾರಂಭವಾದ ಈ ವಿದ್ಯಾರ್ಥಿನಿಲಯದಲ್ಲಿ ಪಿ.ಯು.ಸಿ, ಬಿ.ಎ, ಮತ್ತು 13ಮಂದಿ ಎಂ. ಎ. ವಿದ್ಯಾರ್ಥಿಗಳು ಸೇರಿ ಒಟ್ಟು 46 ಸಂಖ್ಯೆ ಇತ್ತು. ಈ ವರ್ಷ ಬಹುಮಂದಿ ಪಿ. ಯು. ಸಿ. ಮತ್ತು ಒಂದಿಬ್ಬರು ಬಿ. ಎ. ವಿದ್ಯಾರ್ಥಿಗಳು ಸೇರಿ ಒಟ್ಟು ಸಂಖ್ಯೆ 60ಕ್ಕೆ ಏರಿದೆ.

ಈ ವಿದ್ಯಾರ್ಥಿನಿಲಯದಲ್ಲಿ ಚಿಕ್ಕಚಿಕ್ಕದಾಗಿ ಆರು ಕೊಠಡಿಗಳಿದ್ದು, ನಾಲ್ಕು ಕೊಠಡಿಗಳಲ್ಲಿ-ಪ್ರತಿಯೊಂದರಲ್ಲಿ 14, 12, 15, 12 ಮಂದಿ ವಿದ್ಯಾರ್ಥಿಗಳಿದ್ದಾರೆ. ರಾತ್ರಿ ವೇಳೆಯಲ್ಲಿ ಉಳಿದ ವಿದ್ಯಾರ್ಥಿಗಳು ವರಾಂಡದಲ್ಲಿ ಮಲಗುತ್ತಾರೆ. ಅಡಿಗೆ ಮತ್ತು ಊಟ ಮಾಡಲು ಇನ್ನೆರಡು ಕೊಠಡಿಗಳಿರುವ ಈ ಮನೆಗೆ '850 ರೂ. ಬಾಡಿಗೆ' ಕೊಡುತ್ತಿರುವುದಾಗಿ ವಿದ್ಯಾರ್ಥಿಗಳಿಗೆ ನಿಲಯಪಾಲರು ಹೇಳುತ್ತಿದ್ದಾರೆ. ನಿಜಾಂಶ ಗೊತ್ತಿಲ್ಲದ ಎಲ್ಲಾ ವಿದ್ಯಾರ್ಥಿಗಳೂ ಈ ಬಗ್ಗೆ ಅನುಮಾನಿತರಾಗಿದ್ದಾರೆ.

ಇಲ್ಲಿನ ನಿಲಯಪಾಲ ಹರಿಜನರೇ ಆದ ಶ್ರೀ ಜಿ.ಸಿ. ಬೈರಯ್ಯ-ಯುವರಾಜಾ ಕಾಲೇಜಿನ ಅಧ್ಯಾಪಕರು.

ವಿದ್ಯಾರ್ಥಿನಿಲಯಗಳಲ್ಲಿ ಊಟವಸತಿ ಇತ್ಯಾದಿ ದುಬಾರಿ ಖರ್ಚನ್ನು ಹಿಡಿತದಲ್ಲಿಡಲು ಪ್ರಧಾನಿಯವರ 20 ಅಂಶಗಳ ಆರ್ಥಿಕ ಕಾರ್ಯಕ್ರಮಗಳಿಗೆ ಈ ವಿದ್ಯಾರ್ಥಿನಿಲಯ ಸಿಲುಕಿಲ್ಲ ಎಂಬುದಕ್ಕೆ ಇಲ್ಲಿನ ಊಟದಖರ್ಚಿನ ಬಿಲ್ಲು ಸಾಕ್ಷಿ. ಅನ್ನ, ತಿಳಿಸಾಂಬಾರು ಮತ್ತು ನೀರುಮಜ್ಜಿಗೆ ಸೇರಿದ ಮಧ್ಯಾಹ್ನದ ಊಟ, ಬೆಳಿಗ್ಗೆ ತಿಂಡಿ ಮತ್ತು ರಾತ್ರಿ ಪ್ಲೇಟ್ ಊಟ. ವರ್ಷವಿಡೀ ಸಸ್ಯಹಾರಿ ಊಟವಿರುವ ಇಲ್ಲಿ ಕಳೆದ ವರ್ಷ ಊಟದ ವೆಚ್ಚ ತಿಂಗಳೊಂದಕ್ಕೆ 140 ರಿಂದ 200 ರೂ. ಗೂ ದಾಟಿದೆ. ಕಳೆದ ಜುಲೈ ತಿಂಗಳು 18 ದಿನಕ್ಕೆ 96 ರೂ. ಊಟದ ವೆಚ್ಚ ತಗುಲಿದೆ.

ಪ್ರತಿ ವಿದ್ಯಾರ್ಥಿಗೂ ಕೇಂದ್ರ ಮತ್ತು ರಾಜ್ಯ ಸರಕಾರದಿಂದ ಬರುವ ವಿದ್ಯಾರ್ಥಿ ವೇತನ 125 ರೂ. ಉಳಿದ ಹಣವನ್ನು ವಿದ್ಯಾರ್ಥಿಗಳೇ ಕಟ್ಟಬೇಕಾಗಿದೆ.

ಪ್ರತಿ ತಿಂಗಳು ಪ್ರತಿ ವಿದ್ಯಾರ್ಥಿಗೆ ತಗಲುವ ಊಟದ ವೆಚ್ಚವನ್ನು ಸರಿಯಾಗಿ ಪ್ರಕಟಿಸುತ್ತಿಲ್ಲ. ಎಲ್ಲವೂ ಗೋಪ್ಯ. ಈ ಬಗ್ಗೆ ವಿದ್ಯಾರ್ಥಿಗಳು ನಿಲಯಪಾಲರಲ್ಲಿ ಕೇಳಿದಾಗ " ನೀವ್ಯಾರ್ರೀ ಕೇಳೋಕೆ ಕ್ಲಾರ್ಕ್ ಉಂಟು ನಾನುಂಟು " ಎಂಬ ಸಿಟ್ಟಿನ ಉತ್ತರ.

ವಿದ್ಯಾರ್ಥಿ ನಿಲಯದಲ್ಲಿನ ಆಡಳಿತ ಅವ್ಯವಹಾರ ಮತ್ತು ದುಬಾರಿ ಊಟದ ವೆಚ್ಚದ ಬಗ್ಗೆ ವಿದ್ಯಾರ್ಥಿಗಳು ಕಳೆದ ಮಾರ್ಚ್ 30 ರಂದು ರಾಜ್ಯಪಾಲರಿಗೂ, ಮುಖ್ಯಮಂತ್ರಿಗಳಿಗೂ ಮತ್ತು ಅವ್ಯವಹಾರ ತನಿಖೆಗೆ ರಾಜ್ಯದ ಜಾಗೃತ ಆಯೋಗಕ್ಕೆ ಮನವಿ ಸಲ್ಲಿಸಿದ್ದಾರೆ. ಈ ಸುದ್ದಿ ತಿಳಿದ ಬೈರಯ್ಯ ತಕ್ಷಣ ಬೆಂಗಳೂರಿಗೆ ಹೋಗಿಬಂದು ಸ್ವಲ್ಪದಿನದ ನಂತರ ಮನವಿ ಸಲ್ಲಿಕೆಯಲ್ಲಿ ಮುಂದಾಳುತನ ವಹಿಸಿದ್ದ ಗಂಗೋತ್ರಿ ವಿದ್ಯಾರ್ಥಿಗಳಿಗೆ " ಏನ್ರೋ ನಿಮ್ಮ ವಿಜಿಲೆನ್ಸ್ ಕಮಿಷನ್ನಿನವರು ಬಂದು ಹರ್ಕೊಂಡ್ರೇನ್ರೋ " " ನಿಮ್ಮ ಮುಖ್ಯಮಂತ್ರಿ ಬಂದ್ರೇನ್ರೋ" " ನಿಮ್ಮನ್ನ ಗಂಗೋತ್ರಿಯಿಂದ ಡಿಸ್‌ಮಿಸ್ ಮಾಡ್ಸಿಬಿಡ್ತಿನಿ " " ನಿಮ್ಮನೇಲೂ ಇಂಗೇ ತಿನ್ತಿದ್ರಾ " ಎಂದು ನಮ್ಮ ಮೇಲೆ ಕೆಂಡಕಾರುತ್ತಿದ್ದರೆಂದು ಹಳೇ ವಿದ್ಯಾರ್ಥಿಯೊಬ್ಬರು ತಮ್ಮ ಕಂಡುಂಡ ಅನುಭವಗಳನ್ನು ತೋಡಿಕೊಂಡರು.

ಕಳೆದ ಏಪ್ರಿಲ್ ತಿಂಗಳಲ್ಲಿ ಗಂಗೋತ್ರಿಯ 13 ಮಂದಿ ವಿದ್ಯಾರ್ಥಿಗಳಿಗೆ ಒತ್ತಾಯದ ಮೇರೆಗೆ 13 ದಿನ ಊಟದ ವ್ಯವಸ್ಥೆ ಇದ್ದುದಕ್ಕೆ ಆ ತಿಂಗಳ ಪೂರ್ತ ಎಸ್ಟಾಬ್ಲಿಷ್‌ಮೆಂಟ್ ಚಾರ್ಜನ್ನು ಮಂಜೂರು ಮಾಡಿಸಿ ಉಳಿಕೆ ಹಣ ಅಥವಾ ಯಾವುದೇ ಲೆಕ್ಕ ತೋರ್ಸದೆ ಹಾಸ್ಟೆಲಿಗೆ ಇನ್ನೂ ನೀವೆ ಹಣ ಕಟ್ಟಬೇಕೆಂದು ನಮ್ಗೆ ಈಗ ಸ್ಕಾಲರ್‌ಷಿಪ್ ತಕ್ಕೊಳಕ್ಕೆ ತೊಂದ್ರೆಕೊಡ್ತಿದ್ದಾರೆಂದು ಆ ವಿದ್ಯಾರ್ಥಿ ತಮ್ಮ ಅಸಹಾಯಕತೆ ವ್ಯಕ್ತಪಡಿಸಿದರು.

ನಿಲಯಪಾಲರ ಅರ್ಭಟ, ದರ್ಪ ಈಗೇನೂ ಕಡಿಮೆಯಾಗಿಲ್ಲ. ಕಳೆದ ತಿಂಗಳು 18 ದಿನಕ್ಕೆ ತಗುಲಿದ ಊಟದ ವೆಚ್ಚ ಮತ್ತಿತರೆ ಸಮಸ್ಯೆಗಳನ್ನು ವಿಚಾರಿಸಿದ ಪಿ. ಯು. ಸಿ. ವಿದ್ಯಾರ್ಥಿಗಳಿಗೆ, "ನಿಮ್ಗೆ ಎಲ್ಲೆಲ್ಲಿ ತೊಂದ್ರೆ ಕೊಡಬೇಕು ಅಂತ ಮನ್ಸ ಮಾಡಿದ್ರೆ ನಿಮ ಇನ್‌ಸ್ಟಿಟ್ಯೂಟ್‌ಗಳಲ್ಲಿ ಸಾವಿರಾರು ತೊಂದ್ರೆ ಕೊಡುಬಲ್ಲೆ " ಎಂದು ಗದರಿಸುತ್ತಾರೆಂದೂ ವಿದ್ಯಾರ್ಥಿಗಳು ಭಯಭೀತರಾಗಿದ್ದಾರೆ.

ವಿಶ್ವವಿದ್ಯಾನಿಲಯದ ವಿದ್ಯಾರ್ಥಿ ನಿಲಯಗಳಲ್ಲಿ ಭಾನುವಾರ ಮತ್ತು ಹಬ್ಬ ಹರಿದಿನಗಳ ವಿಶೇಷ ಸೇರಿ ತಿಂಗಳೊಂದಕ್ಕೆ 125 ರೂ. ಗೆ ಉತ್ತಮ ದರ್ಜೆ ಊಟದ ವ್ಯವಸ್ಥೆ ಇರುವುದನ್ನು ಸಮಾಜಕಲ್ಯಾಣ ಇಲಾಖೆ ಗಮನಿಸಿ ಇಲ್ಲಿ ನಡೆಯುತ್ತಿರುವ ನಿಲಯಪಾಲರ ಅವ್ಯವಹಾರವನ್ನು ಕೂಡಲೆ ತಡೆಗಟ್ಟಿ ಮುಗ್ಧ ವಿದ್ಯಾರ್ಥಿಗಳ ವ್ಯಾಸಂಗಕ್ಕೆ ಒಳ್ಳೆ ವಾತಾವರಣ ಕಲ್ಪಿಸಿ ಕೊಡಬೇಕಾಗಿದೆ. *

# ಮಹಾರಾಣಿ ಕಾಲೇಜು ವಿದ್ಯಾರ್ಥಿ ನಿಲಯದಲ್ಲಿ ದಲಿತ ವಿದ್ಯಾರ್ಥಿನಿಯರಿಗೆ ಕಿರುಕುಳ

ಇತ್ತೀಚೆಗೆ ಮೈಸೂರಿನ ಮಹಾರಾಣಿ ಕಾಲೇಜು ವಿದ್ಯಾರ್ಥಿ ನಿಲಯದಲ್ಲಿ ನಿಮ್ನ ವರ್ಗದ ವಿದ್ಯಾರ್ಥಿನಿಯರ ಮೇಲೆ ಸವರ್ಣೀಯ ಕೊಬ್ಬಿದ ಹೆಣ್ಣುಗಳ ದೌರ್ಜನ್ಯ, ಅಸಭ್ಯವರ್ತನೆ ಹೆಚ್ಚಾಗಿದ್ದು, ಇವರ ಕಿರುಕುಳದಲ್ಲಿ ಬಡ ನಿಮ್ನವರ್ಗದ ವಿದ್ಯಾರ್ಥಿನಿಯರ ಸ್ಥಿತಿ ಚಿಂತಾಜನಕವಾಗಿದೆ.

ಗಲಭೆಗೆ ಕಾರಣ : ಕಳೆದ ತಿಂಗಳು ವಿದ್ಯಾರ್ಥಿನಿಲಯದ 'ಮೆಸ್' ಗೆ ಪ್ರಿಫೆಕ್ಟರ್‌ಗಳ ಆಯ್ಕೆ. ಇದು ನಿಲಯದ ವಾರ್ಡನ್ ತಮಗಿಷ್ಟ ಉಳ್ಳ- ಸವರ್ಣೀಯ ವಿದ್ಯಾರ್ಥಿನಿಯರನ್ನೇ ಆಯ್ಕೆ ಮಾಡಲು ಹವಣಿಸಿದಾಗ ನಿಮ್ನವರ್ಗದ ವಿದ್ಯಾರ್ಥಿನಿಯರು ಚುನಾವಣೆ ಮೂಲಕ ಆಯ್ಕೆಗೆ ಒತ್ತಾಯಿಸಿದರು. ಚುನಾವಣೆಯಲ್ಲಿ ಇಬ್ಬರು ನಿಮ್ನವರ್ಗದ ವಿದ್ಯಾರ್ಥಿನಿಯರು ಮತ್ತಿಬ್ಬರು ಸವರ್ಣೀಯ ವಿದ್ಯಾರ್ಥಿನಿಯರು ಆಯ್ಕೆಗೊಂಡರು.

ಇದನ್ನು ವಿರೋಧಿಸುತ್ತಿರುವ ಸವರ್ಣೀಯ ವಿದ್ಯಾರ್ಥಿನಿಯರು ನಿಮ್ನ ವರ್ಗದ ವಿದ್ಯಾರ್ಥಿನಿಯರಿಗೆ ಆಗಾಗ್ಗೆ ಕಿರುಕುಳ ಕೊಡುತ್ತಿದ್ದು ಒಮ್ಮೊಮ್ಮೆ ಕೈ ಕೈ ಮಿಲಾಯಿಸುವವರೆಗೂ ಪರಿಸ್ಥಿತಿ ಹದಗೆಟ್ಟಿರುವುದಾಗಿ ತಿಳಿದುಬಂದಿದೆ. ಈ ಗಲಭೆಗೆ ನಿಲಯದ ವಾರ್ಡನ್ನರ ಸಂಪೂರ್ಣ ಬೆಂಬಲವಿದ್ದು, ಪ್ರಿಫೆಕ್ಟರ್‌ಗಳಾದ ನಿಮ್ನ ವರ್ಗದ ವಿದ್ಯಾರ್ಥಿನಿಯರಿಗೆ ಕಾಲಕ್ಕೆ ಸರಿಯಾಗಿ ತರಕಾರಿ ಇತ್ಯಾದಿ ಸಾಮಾನುಗಳನ್ನು ಕೊಂಡುತರಲು ಹಣ ಒದಗಿಸದೆ ಮತ್ತು ಸರಿಯಾದ ಸಲಹೆಗಳನ್ನು ಕೊಡದೆ ಇವರ ಮೇಲೆ ಆರೋಪ ಹೊರಿಸಲು ಸವರ್ಣೀಯ ವಿದ್ಯಾರ್ಥಿನಿಯರಿಗೆ ಸಾಮೀಲಾಗಿದ್ದಾರೆ.

ಸುಸಜ್ಜಿತ ಕೊಠಡಿಗಳನ್ನು ಸವರ್ಣೀಯ ವಿದ್ಯಾರ್ಥಿನಿಯರಿಗೆ ಕೊಟ್ಟು 10-12 ಮಂದಿ ನಿಮ್ನವರ್ಗದ ವಿದ್ಯಾರ್ಥಿನಿಯರನ್ನು ಒಂದೊಂದು ಕೊಠಡಿಗೆ ತುಂಬಿರುವ ಮತ್ತು ತಮ್ಮ ವಿದ್ಯಾರ್ಥಿವೇತನದ ಹಣ ವಿವಿಧ ಬಾಬತ್ತಿಗೆ ತಗಲುವ ಖರ್ಚಿನ ಬಗ್ಗೆ ವಿಚಾರಿಸಲು ಹೋದಾಗ ವಾರ್ಡನ್‌ರವರು ಅಸಭ್ಯ ರೀತಿಯಲ್ಲಿ ವರ್ತಿಸುತ್ತಿದ್ದಾರೆಂದು ಹೇಳಲಾಗಿದೆ.

ಇಲ್ಲಿನ ಅವ್ಯವಹಾರ, ತಮ್ಮ ಮೇಲೆ ನಡೆಯುತ್ತಿರುವ ದೌರ್ಜನ್ಯವನ್ನು ಸರ್ಕಾರದ ಗಮನಕ್ಕೆ ತಂದು ಸರ್ಕಾರ ಕೂಡಲೆ ತನಿಖೆ ನಡೆಸಿ ತಪ್ಪಿತಸ್ಥ ವಾರ್ಡನ್‌ರವರನ್ನು ಆ ಹುದ್ದೆಯಿಂದ ಕಳೆದ ತಿಂಗಳ 26 ರಂದು ತೆಗೆಯಲಾಗಿದೆ.

ಈ ಕಾರಣಕ್ಕಾಗಿ ನಿಮ್ನ ವರ್ಗದ ವಿದ್ಯಾರ್ಥಿನಿಯರ ಮೇಲೆ ಸವರ್ಣೀಯ ವಿದ್ಯಾರ್ಥಿನಿಯರನ್ನು ಎತ್ತಿಕಟ್ಟಿ ಈಗ ಮತ್ತೆ ಗಲಭೆ ವಾತಾವರಣ ಉಂಟುಮಾಡಿದ್ದಾರೆ. ಈಗ ನಿಮ್ನ ವರ್ಗದ ವಿದ್ಯಾರ್ಥಿನಿಯರು ಭಯಭೀತರಾಗಿದ್ದಾರೆ.

ಸರಕಾರ ಇತ್ತ ಗಮನಿಸಿ ವಿದ್ಯಾರ್ಥಿನಿಯರಲ್ಲಿ ಈಗ ಶಾಂತ ವಾತಾವರಣ ಉಂಟುಮಾಡಬೇಕೆಂದು ಪಂಚಮ ಒತ್ತಾಯಿಸುತ್ತದೆ.

# ಅಳಲು

## ಜಾತಿ ಪತ್ರದ ಗೋಳು

ಮಾನ್ಯರೆ,

ಇಂದು ಸರ್ಕಾರ ಹರಿಜನ-ಗಿರಿಜನ ಮಕ್ಕಳಿಗೆ ಮುಂದೆ ಬರುವಂತೆ ಪ್ರೋತ್ಸಾಹಿಸಿ ಉಚಿತ, ಪುಸ್ತಕ, ಸ್ಕಾಲರ್‌ಷಿಪ್, ಮತ್ತು ಫೀಜು ಮಾಫಿ ಮಾಡುತ್ತಿರುವುದು ಸರಿಯಷ್ಟೆ. ಆದರೆ ಈ ಹಿಂದೆ ಯಾವ ವಿಧವಾದ ಕೆಲಸಗಳಿಗಾಗಲಿ, ಸ್ಕೂಲುಗಳಿಗೆ ಸೇರುವಾಗಲಾಗಲೀ, ಪರೀಕ್ಷೆಫಾರಂ ಹಾಕುವಾಗಲಾಗಲೀ ಹರಿ-ಗಿರಿಜನ ವ್ಯಕ್ತಿಗಳು ತಮ್ಮ ಜಾತಿಯ ಸರ್ಟಿಫಿಕೇಟನ್ನು ಲಗತ್ತಿಸಲೇಬೇಕು ಮತ್ತು ಇದು ಸುಲಭವಾಗಿ ದೊರೆಯುತ್ತಲೂ ಇತ್ತು. ಆದರೆ ಈಗ ಈ ಸರ್ಟಿಫಿಕೇಟನ್ನು ಪಡೆಯಲು ಆಯಾ ತಾಲ್ಲೂಕಿನ ತಹಸಿಲ್ದಾರರಲ್ಲೋ ಅಥವಾ ಬ್ಲಾಕ್ ಡೆವಲಪ್‌ಮೆಂಟ್ ಆಫೀಸರಲ್ಲೋ ಹೋದಾಗ 5 ರೂಪಾಯಿಯ ಛಾಪಾ ಕಾಗದ ತೆಗೆದುಕೊಂಡು ಪ್ರಮಾಣಪತ್ರ ಬರೆದುಕೊಟ್ಟು ಲಾಯರೊಬ್ಬರನ್ನು ಹಿಡಿದು ಅವರಿಗೂ ಫೀಜು ಕೊಟ್ಟು ಜಡ್ಜರಿಂದ ಸಹಿ ಮಾಡಿಸಿ (ಇದಕ್ಕೆ ಸೀಲಾಕಿಸಲು ಜವಾನನಿಗೂ ಲಂಚ ಕೊಡಬೇಕಾಗುತ್ತೆ) ನಂತರ ಜಾತಿ ಸರ್ಟಿಫಿಕೆಟ್ ಪಡೆಯಬೇಕು. ಇದಕ್ಕಾಗಿಯೇ ದೂರದ ಊರಿಂದ ಬಂದು ನಾಲ್ಕಾರು ದಿನ ಅಲೆದಾಡಿದ ಮೇಲೆ ಸಿಗುವ ಈ ಸರ್ಟೀಫಿಕೇಟಿಗೆ ಸುಮಾರು 50 ರೂಗಳತನಕ ಖರ್ಚಾಗುತ್ತದೆ. ಒಂದೊತ್ತಿನ ಕೂಳಿಗೂ ಗತಿಯಿಲ್ಲದೆ ಬದುಕಿರುವ ಈ ಜನರಿಗೆ ಈ ರೀತಿಯಾಗಿ ಸರ್ಟಿಫಿಕೇಟ್ ಪಡೆಯುವುದು ಒಂದು ದೊಡ್ಡ ತಲೆ ನೋವಿನ ಸಂಗತಿಯೇ ಸರಿ. ಇನ್ನು ಮುಂದೆಯಾದರೂ ಈ ರೀತಿಯ ವ್ಯವಸ್ಥೆಯನ್ನು ತೆಗೆದು ಸುಲಭವಾಗಿ ಸರ್ಟಿಫಿಕೇಟ್ ದೊರಕುವಂತೆ ಮಾಡಿದರೆ ಅದೆಷ್ಟೋ ಜನ ನೆಮ್ಮದಿಯ ನಿಟ್ಟುಸಿರನ್ನ ಬಿಟ್ಟಾರು. ಇಲ್ಲವಾದಲ್ಲಿ ಸರಕಾರ ಎಲ್ಲಾ ಹರಿಜನ-ಗಿರಿಜನರ ಹಣೆಯ ಮೇಲೆ ಆಯಾ ಜಾತಿಯ ಸೀಲನ್ನು ಒತ್ತುವ ವ್ಯವಸ್ಥೆಯೇನ್ನಾದರೂ ಮಾಡಲಿ.

–'ದಲಿತ'
ಪಿರಿಯಾಪಟ್ಟಣ
ಮೈಸೂರು ಜಿಲ್ಲೆ

## ದಕ್ಕದ ವೃದ್ಧಾಪ್ಯ ವೇತನ

ಎಳಕೊಂಡರೆ ಯಾವ ಭಾಗವನ್ನು ಪೂರ್ತಿ ಮುಚ್ಚದ ಕೊಳೆ ಹರಕಲು ಬಟ್ಟೆ, ಹಣ್ಣಾದ ಕೈಕಾಲು, ಬತ್ತಿ ಹೋದ ಕಣ್ಣು, ದೃಷ್ಟಿ, ಮಾತು– ಎಲ್ಲಾ. ಹೊಟ್ಟೆಗೇನೂ ಇಲ್ಲ ಸಾಮಿ ಏನಾರೂ..." ಕೂಗಿದರೂ ಯಾರಿಗೂ ಕೇಳಿಸುವುದಿಲ್ಲ. ನೀಡಿದ ಕೈ, ಕಾಯುವ ಕಣ್ಣು ಹಾಗಾಗೇ.

–ಇಂಥ ಯಾರೂ ಇಲ್ಲದ ಅನಾಥ ವೃದ್ಧರು ಎಲ್ಲಾ ಊರು ಕೇರಿಗಳಲ್ಲೂ ಸಿಕ್ಕುತ್ತಾರೆ. ಆದರೆ ಎಲ್ಲರ ತುಳಿದ ಮಧ್ಯೆ ಧಾಸ್ಯಕ್ಕೆಂದೇ ಬದುಕುವ ಹರಿಜನ ಅಥವಾ ದಲಿತರಲ್ಲ ಇಂಥವರ ಸಂಖ್ಯೆ ಬಹಾಳ. ಇಂಥವರಿಗೆ ರಕ್ಷಣೆ ಕೊಡುವ ಉದ್ದಿಶ್ಯದಿಂದ ಸರ್ಕಾರ ವೃದ್ಧಾಪ್ಯ ವೇತನ' ಕೊಡಲಾಗುತ್ತೆ ಎಂದು ಬಲು ಹಿಂದೆಯೇ ಘೋಷಿಸಿದೆ. ಆದರೆ ಇದು, ಮಧ್ಯದ ದಳ್ಳಾಳಿಗಳ ಮತ್ತು ಪುಢಾರಿಗಳ ಕೈವಾಡದಿಂದ ನಿಜವಾದ ಅನಾಥರು ವೃದ್ಧರು ಹಾಗಾಗೇ ಉಳಿಯುತ್ತಿದ್ದಾರೆ. ಪುಢಾರಿಗಳ ಬೆಂಬಲ ಒಂದಿದ್ದರೆ ಸಾಕು ಅನಾಥರಾಗಲಿ ಇಲ್ಲದಿರಲಿ, ವೃದ್ಧರಾಗಿರಲಿ ವೃದ್ಧಾಪ್ಯ ವೇತನ ಸಿಕ್ಕುತ್ತೆ, ಎನ್ನುವಂತಾಗಿದೆ. ಹೀಗೆ ಸುಳ್ಳು ಕಾರಣಗಳಕೊಟ್ಟು ಈ ಅನುಕೂಲವನ್ನು ಪಡೆದಿರುವ ಸುಮಾರು ಉದಾಹರಣೆಗಳಿವೆ. ಏನೇನೂ ಇಲ್ಲದೆ ಅನಾಥರಾಗಿರುವವರ ಹತ್ತಿರ ಪುಢಾರಿಗಳು ಬರುವುದಿಲ್ಲ, ಏಕೆಂದರೆ ವೃದ್ಧಾಪ್ಯವೇತನ ಪಡೆಯುವ ಮೊದಲು ಅರ್ಜಿ ಹಾಕಿಕೊಳ್ಳುವುದಕ್ಕಾಗಿಯೇ ಪುಢಾರಿಗಳಿಗೆ ಸಾಕಷ್ಟುಹಣ ಕೊಡಬೇಕಾಗುತ್ತದೆ. ಇದರಿಂದ ಪುಢಾರಿಗಳಿಗೆ ಮೊದಲೇ ಹಣ ಕೊಡಬಲ್ಲ (ನಿಜವಾದ ಅನಾಥರಲ್ಲದ) ವರು ವೃದ್ಧಾಪ್ಯವೇತನ ಪಡೆಯುತ್ತಾರೆ. ಏನೂ ಇಲ್ಲದ ಅನಾಥ ದಲ್ಲಿತ ವೃದ್ಧರು ಪುಢಾರಿಗಳ ಮಧ್ಯಸ್ತಿಕೆ ಇಲ್ಲದೆ ಸಂಬಂಧಪಟ್ಟ ಆಫೀಸಿನ ಬಾಗಿಲನ್ನೂ ತಲುಪಲಾಗುವುದಿಲ್ಲ. ಏಕೆಂದರೆ ಆಫೀಸುಗಳ ಕ್ಲಿಷ್ಟತೆ, ಷರತ್ತುಗಳ ಕ್ಲಿಷ್ಟತೆಯಿಂದಾಗಿ "ಈ ವೇತನ ಕೇಳುವುದಕ್ಕಿಂತ ಭಿಕ್ಷೆಕೇಳುವುದು ವಾಸಿ ಎನಿಸಿಬಿಡುತ್ತದೆ." ಇವೆಲ್ಲದರಿಂದ ಅನಾಥರು ಅನಾಥರಾಗುತ್ತಾರೆ. ಜೀವನೋಪಾಯದ ಕೊನೆಯ ಮಾರ್ಗವಾದ ಭಿಕ್ಷೆ ಇವರ ಗುರಿಯಾಗುತ್ತದೆ. ಹಣ ಇದ್ದು ಅನಾಥರಲ್ಲದವರಿಗೆ ವೃದ್ಧಾಪ್ಯ ವೇತನ ಸಿಕ್ಕುತ್ತದೆ. ಮಧ್ಯದ ಪುಢಾರಿಗಳ ಪುಂಡುಗಾರಿಕೆ ಬೆಳೆಯುತ್ತದೆ ಇತ್ಯಾದಿ ಇತ್ಯಾದಿ.

—ಮಹದೇವಪ್ರಸಾದ್
ಗಾಂಧಿನಗರ ಮೈಸೂರು

## ಕುಟುಂಬ ಯೋಜನೆ ಹಣ ನೀಡಿಕೆಯಲ್ಲಿ ಮೋಸ

ನಮ್ಮ ಸರ್ಕಾರ ಕುಟುಂಬ ಯೋಜನಯನ್ನು ಬಿಗಿಯಾಗಿ ಪಾಲಿಸಲು ಈ ವರ್ಷ ಒಂದು ಕೋಟಿ ಹತ್ತು ಲಕ್ಷ ರೂ. ಖರ್ಚು ಮಾಡಲು ಮುನ್ನುಗ್ಗುತ್ತಿರುವುದು ಸರಿಯಷ್ಟೆ. ಇದರ ಸಹಾಯಕ್ಕೆ ಆಯಾ ಸ್ಥಳೀಯ ಸಂಸ್ಥೆಗಳು ನೆರವಿಗೆ ಬಂದಿವೆ.

ಅವುಗಳಲ್ಲಿ ಮುಖ್ಯವಾಗಿ ಇತ್ತೀಚೆಗೆ ಪಿರಿಯಾಪಟ್ಟಣದಲ್ಲಿ ಸಾಮೂಹಿಕ ಕುಟುಂಬ ಯೋಜನೆ ಶಿಬಿರ ಏರ್ಪಡಿಸಿದಾಗ ಇಲ್ಲಿನ ತಾಲ್ಲೋಕು ಅಭಿವೃದ್ಧಿ ಮಂಡಲಿ ಮತ್ತು ಗ್ರಾಮ ಪಂಚಾಯಿತಿ, ಸರಕಾರ ಕೊಡುವ ಹಣದ ಜೊತೆಗೆ, ಎರಡು ಮಕ್ಕಳಿದ್ದವರು, ಮೂರು ಮಕ್ಕಳಿದ್ದವರು, ಮತ್ತು ನಾಲ್ಕು ಮತ್ತು ಮೇಲ್ಪಟ್ಟು ಮಕ್ಕಳಿದ್ದವರು ಶಸ್ತ್ರ ಚಿಕಿತ್ಸೆಗೆ ಒಳಪಟ್ಟರೆ ಕ್ರಮವಾಗಿ ಹರಿಜನ-ಗಿರಿಜನರಿಗೆ 55 ರೂ. ಮತ್ತು ಇತರರಿಗೆ 30 ರೂ., ಜೊತೆಗೆ ಇನ್ನಿತರ ಖರ್ಚು ಸಹ ಕೊಡಲಾಗುವುದು, ಎಂದು ತಾಲ್ಲೋಕು ಅಭಿವೃದ್ಧಿ ಮಂಡಲಿಯು ಕರಪತ್ರವೊಂದನ್ನು ಪ್ರಕಟಿಸಿ ತಿಳಿಸಿದೆ. ಆದರೆ ಈ ಹಣವನ್ನು ಚಿಕಿತ್ಸೆ ಮಾಡಿಸಿಕೊಂಡ ಕೂಡಲೆ ಕೊಡುತ್ತಿಲ್ಲ. 'ಹೊಲಿಗೆ ಬಿಚ್ಚಿದನಂತರ ಕೊಡುತ್ತೇವೆ' ಹೇಳುತ್ತಾರೆ. ಹಣದ ಆಶೆಗಾಗಿ ಹಳ್ಳಿಗಳಿಂದ ನೂರಾರು ಬಡ ಹರಿ-ಗಿರಿಜನರು ಚಿಕಿತ್ಸೆ ಮಾಡಿಸಿಕೊಂಡಿದ್ದಾರೆ. ಆದರೆ ತಿಂಗಳಾದರೂ ಈಗಲೂ ಚಿಕಿತ್ಸೆ ಮಾಡಿಸಿಕೊಂಡ ಜನ ಬಿ.ಡಿ.ಓ ಅವರ ಹತ್ತಿರಕ್ಕೆ ತಿರುಗುತ್ತಿದ್ದಾರೆ. ಈ ಜನಕ್ಕೆ ಈಗ ಸಿಗುತ್ತಿರುವ ಉತ್ತರ 'ಹಣ ಕೊಡುವುದನ್ನು ಈಗ ನಿಲ್ಲಿಸಲಾಗಿದೆ' ಎಂದು. ಇದಲ್ಲದೆ ಹಣ ಪಡೆದವರಿಂದಲೂ ಸಹ ರೂಪಾಯಿನ ಅಂಕಿಅಂಶಗಳಿಲ್ಲದ ಕಾಗದಲ್ಲಿ ಬರೆ ಸಹಿ ಮಾಡಿಸಿಕೊಂಡು ಹಣ ಕೊಟ್ಟಿದ್ದಾರೆ. ಹಾಗೂ ಇನ್ನೂ ಮದುವೆಯೇ ಆಗದ ಯುವಕನೊಬ್ಬನಿಗೆ 110 ರೂ. ಕೊಟ್ಟು ಚಿಕಿತ್ಸೆ ಮಾಡಲಾಗಿದೆ.

ಹಣದ ಆಮಿಷಕ್ಕೆ ಬಲಿಯಾದವರೆಂದರೆ ಬಹಳಷ್ಟು ಬಡ ಹರಿಜನ ಗಿರಿಜನರು. ಆದ್ದರಿಂದ ಸರ್ಕಾರ ಇತ್ತ ಗಮನಿಸಿ ತಾಲ್ಲೋಕು ಅಭಿವೃದ್ಧಿ ಮಂಡಲಿಯ ಈ ಮೋಸದ ಬಗ್ಗೆ ಕ್ರಮ ತೆಗೆದುಕೊಳ್ಳಬೇಕೆಂದು ಈ ಮೂಲಕ ಕೋರುತ್ತೇನೆ.

–ಟಿ. ರಾಮೇಗೌಡ
ಮುತ್ತೂರು, ಪಿರಿಯಾಪಟ್ಟಣ ತಾ||

## ರೇಷ್ಮೆ ಖದೀಮರು

ನಾಕಂಡಂತೆ ಮೈಸೂರು ಜಿಲ್ಲೆಯ ನಂಜನಗೂಡು, ಚಾಮರಾಜನಗರ ಮತ್ತು ನರಸೀಪುರ ತಾಲ್ಲೂಕುಗಳು ಈ ಮೇಲಿನ ಹೆಸರಿಗೆ ಪ್ರಸಿದ್ಧಿಯಾದವು. ಒಬ್ಬ ಸಾಮಾನ್ಯ ಜಮೀನಿರುವ ಮನುಷ್ಯನಿಂದ ಹಿಡಿದು ಬಬ್ಬ ಸಾಹುಕಾರನ ತನಕ ರೇಶ್ಮೆ ಬೆಳೆಯುವ ವಾಡಿಕೆಯಿದೆ. ಆದರೆ ರೆಶ್ಮೆ ಬೆಳೆದರೂ ಅದರ ಲಾಭವನ್ನು ಕಂಡುಣ್ಣುತ್ತಿರುವ ಜನರೇ ಬೇರೆ!

ರೇಷ್ಮೆ ಖದೀಮರಿಂದ ಈ ತಾಲ್ಲೂಕುಗಳ ಹಳ್ಳಿಗಳಲ್ಲಿ ಬಹಳಷ್ಟು ಮಂದಿ ಹರಿಜನರಿಗೆ ತೊಂದರೆಯಾಗುತ್ತಿದೆ. ಈ ಖದೀಮರು ಮಾಡುವ ಕೆಲಸಗಳು ಈ ಕೆಳಗಿನಂತಿವೆ–

1. ತಮ್ಮೂರೊಳಗೆ ಮತ್ತು ಅಕ್ಕ ಪಕ್ಕದ ಊರೊಳಗಲ ಎಲ್ಲಾ ಜಾತಿಯ ಜನರಿಗೂ, ಹೆಚ್ಚಾಗಿ ಹರಿಜನರಿಗೆ ಒಂದಿಷ್ಟು 'ಅಡ್ವಾನ್ಸ್ ಹಣ' ಅಂತ ಕೊಡುವರು.
2. ಹಣಕೊಟ್ಟ ಮೇಲೆ ಪ್ರತೀಸಾರಿ ಬೆಳೆದ ರೇಷ್ಮೆಯನ್ನು ಇವರು ಅಡ್ವಾನ್ಸ್‌ದಾರರಿಂದ ತೆಗೆದುಕೊಂಡು ಹೋಗುವರು.
3 ರೇಷ್ಮೆಯನ್ನು ತೆಗೆದುಕೊಂಡು ಬಂದು ಇವರಿಗೆ ಬೇಕಾದ ಸರ್ಕಾರೀ ಮಾರುಕಟ್ಟೆಯಲ್ಲೊ ಅಥವ ಖಾಸಗೀ ಮಾರುಕಟ್ಟೆಯಲ್ಲೋ ಮಾರಿಬಿಡುವರು.
4. ಮಾರಿದ ಮೇಲೆ ಊರಿಗೆ ಬಂದು ಖರ್ಚು ವಗೈರೆ ಎಲ್ಲಾ ಕಳೆದು ತನಗೆ ಬೇಕಾದಷ್ಟು ಹಣವನ್ನು ಹಿಡಿದುಕೊಂಡು ಉಳಿದುದ್ದನ್ನು ಅಡ್ವಾನ್ಸ್‌ದಾರರಿಗೆ ಕೊಡುವರು.
5. ರೇಷ್ಮೆಗೂಡನ್ನು ತೆಗೆದಕೊಂಡರೂ ಇವರು ಪ್ರತಿ. ಕೆ.ಜಿ.ಗೆ ಇಷ್ಟು ಹಣ ಅಂತ ಬೆಲೆ ಹಿಡಿದುಕೊಳ್ಳುವರು ಈ ಖದೀಮರು ಈ ರೀತಿ ಮಾಡುವುದು ತಾನು ಮೊದಲು ಕೊಟ್ಟ ಅಡ್ವಾನ್ಸ್ ಹಣದ ಬಡ್ಡಿಗೆ ಬಡ್ಡಿ ಹಾಕಿ ದುಡಿಯುವ ವ್ಯವಹಾರ ಮಾಡುವರು.

ಇಂಥ ವ್ಯಾಪಾರದ ಜನರ ಕೈಗೆ ಸಿಕ್ಕಿ ನರಳುತ್ತಿರುವ ಹರಿಜನರು ಇವತ್ತೂ ಹೊರಬರದೆ ಸೋತುಹೋಗಿದ್ದಾರೆ. ಮಕ್ಕಳು, ಹೆಂಡತಿ ಅಂತೆಲ್ಲಾ ಇವರುಗಳ ಹೊಲ ಗದ್ದೆಗಳಲ್ಲಿ ಉಪ್ಪು ನೇರಳೆ ಸೊಪ್ಪನ್ನು ಕೊಯ್ದುಕೊಂಡು ಜೀವನ ಮಾಡುತ್ತಿದ್ದಾರೆ.

–ಮಹದೇವಮೂರ್ತಿ
ನಂಜನಗೂಡು

# 'ಜಾತಿವಿನಾಶ'

ಜಾತಿ ವಿನಾಶದ ಬಗ್ಗೆ ನೂರಾರು ಸೂತ್ರಗಳು, ಮಾತುಗಳು, ಅಸಡ್ಡೆಗಳು ಇವೆ. ಆದರೆ ಎಲ್ಲರ ಕಾಲಕಳಗೆ ಬದುಕಿರುವ ಹೊಲೆಮಾದಿಗರಿಗೆ ಜಾತಿ ನಿರ್ಮೂಲನದ ಅತೀವ ತುರ್ತಿನಿಂದಾಗಿ ಅವರಿಗೆ ತಮ್ಮದೇ ಆದ ನೋವು ಮತ್ತು ಸೂತ್ರಗಳಿವೆ. 'ಅನಿಲೇಷನ್ ಆಫ್ ಕ್ಯಾಸ್ಟ್' ಪುಸ್ತಕದಲ್ಲಿ ದಲಿತರ ನೋವಿನ ಪ್ರತಿನಿಧಿ ಡಾ|| ಬಿ.ಆರ್. ಅಂಬೆಡ್ಕರ್ ಅವರು ಈ ಬಗ್ಗೆ ಸರಳವಾಗಿ ಸ್ಪಷ್ಟವಾಗಿ ಬರೆದಿದ್ದಾರೆ. ಇದರ ಅನುವಾದವನ್ನು ಇಲ್ಲಿ ಧಾರಾವಾಹಿಯಾಗಿ ಪ್ರಕಟಿಸುತ್ತಿದ್ದೇವೆ.

—ಸಂಪಾದಕ

---

ಮೂಲ: ಡಾ|| ಬಿ. ಆರ್. ಅಂಬೇಡ್ಕರ್
ಅನು : ಮ.ನ.ಜವರಯ್ಯ

---

ಪ್ರಿಯ ಬಂಧುಗಳೆ,

ಈ ಸಮ್ಮೇಳನಕ್ಕೆ ಅತ್ಯಂತ ಸಹನೆಯಿಂದ ನನ್ನನ್ನು ಅಧ್ಯಕ್ಷನನ್ನಾಗಿ ಆಯ್ಕೆ ಮಾಡಿದ್ದ ಜಟ್‌ಪಟ್ ಟೋಡಕ್ ಮಂಡಳಿಯ ಕಾರ್ಯಕರ್ತರಿಗೆಲ್ಲಾ ಬಹುಶಃ ನಿರಾಶೆಯಾಗಿರಬಹುದು. ಅದಕ್ಕಾಗಿ ವಿಷಾದಿಸುತ್ತೇನೆ. ಈ ಸಮ್ಮೇಳನದ ಅಧ್ಯಕ್ಷನಾಗಬಹುದಾಗಿದ್ದ ನನ್ನನು ಅವರು ಅನೇಕ ರೀತಿಯಲ್ಲಿ ಪ್ರಶ್ನಿಸಬಹುದೆಂದುಕೊಂಡಿದ್ದೆ. ಅದು ಹಾಗಿರಲಿ. ಆದರೆ ಲಾಹೋರ್‌ನಲ್ಲಿ ನಡೆಯಲಿದ್ದಂಥ ಈ ಸಮ್ಮೇಳನಕ್ಕೆ ಮುಂಬೈ ಪ್ರಾಂತದಿಂದ ನನ್ನನ್ನೇಕೆ ಆಹ್ವಾನಿಸಿತು ಎಂಬುದಕ್ಕೆ ಈ ಮಂಡಲಿ ಉತ್ತರ ಹೇಳಬೇಕಾದೀತು. ಅವರ ದೃಷ್ಟಿಗೆ ನನಗಿಂತ ಉತ್ತಮನಾಗಿ ಕಾಣಬಹುದಾಗಿದ್ದ ವ್ಯಕ್ತಿಯನ್ನು ಅವರು ಆಯ್ಕೆ ಮಾಡಬಹುದಿತ್ತು. ಏಕೆಂದರೆ ಹಿಂದೂಗಳನ್ನು ನಾನು ಟೀಕಿಸಿದ್ದೇನೆ. ಅವರು ಪೂಜಿಸುವ ಮಹಾತ್ಮ ಗಾಂಧಿಯ ನಿಷ್ಠೆ, ಪ್ರಾಮಾಣಿಕತನ ಎಷ್ಟೆಂಬುದನ್ನು ಪ್ರಶ್ನಿಸುತ್ತಲೇ ಬಂದಿದ್ದೇನೆ.

ಮಹನಿಯರೆ !

ಇಂದು ಯಾರ ದೃಷ್ಟಿಗೆ ನಾನು ಮೊಗ್ಗುಲ ಹಾವಿನಂತೆ ಕಂಡಿದ್ದೇನೋ ಅವರು ಒಂದಲ್ಲ ಒಂದು ರೀತಿಯಲ್ಲಿ ನನ್ನ ಮೇಲೆ ದ್ವೇಷ ಕಾರಿದರೆಂದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಒಂದು ವೇಳೆ ಈ ಸಮ್ಮೇಳನದ ಗೌರವ ಪೀಠವಾದಂಥ ಅಧ್ಯಕ್ಷ ಸ್ಥಾನಕ್ಕೆ ನನ್ನನ್ನೇಕೆ ಆಹ್ವಾನಿಸಿದರು ಎಂದು ಯಾವ ಹಿಂದೂ ರಾಜಕೀಯ ಧುರೀಣರಾದರೂ ಈ ಮಂಡಲಿಯನ್ನು ಪ್ರಶ್ನಿಸಿದರೂ ಆಶ್ಚರ್ಯಪಡುವಂತಿಲ್ಲ. ಹಾಗೆಯೇ ಇದೊಂದು ಮಹಾ ಅವಮಾನವೆಂದು ಆ ದುರೀಣರು ನನ್ನನ್ನು ಜರಿದರೂ ಸೋಜಿಗವೇನಿಲ್ಲ. ಆದರೆ ನನ್ನ ದೃಷ್ಟಿಗೆ ಮಾತ್ರ ಇದೊಂದು ಮಹಾನ್ ಸವಾಲೇ ಸೈ,

ನಾನು ಈ ಸಮ್ಮೇಳನದ ಅಧ್ಯಕ್ಷನಾಗುವುದನ್ನು ಯಾವ ಹಿಂದುವೂ ಸಹಿಸಲಾರನೆಂಬುದನ್ನು ನಾನು ಬಲ್ಲೆ. ಈ ಪೀಠಕ್ಕೆ ಅಧ್ಯಕ್ಷನನ್ನು ಆಯ್ಕೆ ಮಾಡುವಾಗ ನಮ್ಮ ಧರ್ಮಶಾಸ್ತ್ರಗಳ ಆಜ್ಞೆಯನ್ನು ನೀವೇಕೆ ಮೀರಿದಿರಿ ? ಎಂದು ಈ ಸಮಿತಿಯನ್ನು ಯಾರಾದರೂ ಪ್ರಶ್ನಿಸಿದರೆ ಅದರಲ್ಲಿ ವೈಚಿತ್ರ್ಯವೇನೂ ಇಲ್ಲ. ಅವರ ಧರ್ಮ-ಶಾಸ್ತ್ರಗಳ ಪ್ರಕಾರ ಉಳಿದ ಮೂರು ವರ್ಣಗಳಿಗೆ ಬ್ರಾಹ್ಮಣನೇ ಗುರು ಎಂಬುದನ್ನು ಅವರು ಬಲ್ಲರಷ್ಟೆ! ಏಕೆಂದರೆ 'ವರ್ಣಾನಾಂ ಬ್ರಾಹ್ಮಣೋ ಗುರು' (ಎಲ್ಲ ವರ್ಣಗಳಿಗೂ ಬ್ರಾಹ್ಮಣನೇ ಗುರು) ಎಂತಲೇ ಧರ್ಮಶಾಸ್ತ್ರಗಳು ಇಂದಿಗೂ ಅಪ್ಪಣೆ ಕೊಡಿಸುವುದು. ಅಂದಮೇಲೆ ಹಿಂದೂವಾದವನು ಯಾರಿಂದ ಏನನ್ನು ಕೇಳಿತಿಳಿಯಬೇಕು, ಯಾರಿಂದ ಏನನ್ನು ಕೇಳಿ ತಿಳಿಯಬಾರದು ಎಂಬುದು ಈ ಮಂಡಲಿಗೆ ತಿಳಿಯದ ವಿಚಾರವೇನೂ ಅಲ್ಲ. ಒಬ್ಬ ವ್ಯಕ್ತಿಗೆ ಇಷ್ಟು ಪಾಂಡಿತ್ಯವಿದೆ ಎಂಬ ಒಂದೇ ಒಂದು ಕಾರಣದಿಂದ ಅವನನ್ನು 'ನಮ್ಮ ಗುರು' ಎಂದು ಒಪ್ಪಿಕೊಳ್ಳಬಹುದಾದ ಯಾವ ಹಿಂದೂವನ್ನೂ ಅವನ ಧರ್ಮಶಾಸ್ತ್ರಗಳು ಸುಮ್ಮನೆ ಬಿಡುವುದಿಲ್ಲ. ಮಹಾರಾಷ್ಟ್ರದ ಬ್ರಾಹ್ಮಣ ಸಂತನಾದ ಸಮರ್ಥ ರಾಮದಾಸ್, ಹಿಂದೂ ರಾಜ್ಯ ನಿರ್ಮಾಣದ ರಾಗ ಹಾಡಿಕೊಂಡು ಶಿವಾಜಿಯ ಕೈಗೆ ಖಡ್ಗ ಹಿಡಿಸಿದನೆಂಬುದೇನೂ ಗುಟ್ಟಿನ ಮಾತಲ್ಲ. ಮರಾಠಿ ಭಾಷೆಯಲ್ಲಿರುವ ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ವಿಚಾರಗಳನ್ನೊಳಗೊಂಡಂಥ ಸಂಕಲನವಾದ ತನ್ನ 'ದಾಸಬೋಧೆ', ಎಂಬ ಗ್ರಂಥದಲ್ಲಿ ಹಿಂದೂಗಳನ್ನು ಕುರಿತು ಸಮರ್ಥ ರಾಮದಾಸ್ 'ನಮ್ಮ ಗುರು' ಎಂದು ಒಪ್ಪಿಕೊಳ್ಳಲು ಹೇಗೆ ಸಾಧ್ಯ?' ಎಂದು ಪ್ರಶ್ನಿಸುತ್ತಾನೆ. ಈ ಪ್ರಶ್ನೆಗೆ ನಕಾರಾತ್ಮಕ ಉತ್ತರವನ್ನೂ ಹೇಳಿದ್ದಾನೆ. ಇಂಥ ಪ್ರಶ್ನೆಗಳಿಗೂ ಈ ಮಂಡಲಿಯೇ ಉತ್ತರ ಹೇಳಲಿ ಹಿಂದೂಗಳಿಗೆ ಅಪ್ರಿಯನಾದ ನನ್ನನ್ನು ಈ ಸಮ್ಮೇಳನದ ಅಧ್ಯಕ್ಷನನ್ನಾಗಿ ಆಯ್ಕೆ ಮಾಡಲು ಲಾಹೋರ್‌ನಿಂದ ಮುಂಬೈ ಪ್ರಾಂತದವರೆಗೂ ಏಕೆ ಪ್ರಯಾಣ ಮಾಡಿದರೆಂಬುದು ಮಂಡಲಿಗೆ ಚನ್ನಾಗಿ ತಿಳಿದಿದೆ. ಸವರ್ಣ ಹಿಂದೂ ಸಭಿಕರನ್ನು ಕುರಿತು ಮಾತನಾಡಲು ಒಬ್ಬ ಅಸ್ಪೃಶ್ಯನನ್ನೇ ಏಕೆ ಆಯ್ಕೆ ಮಾಡಿದರು ? ಇದೂ ಅವರಿಗೆ ತಿಳಿದಿದೆ.

ಯಾವ ಸೇಡು-ಯಾರ ಮೇಲೆ ?

ನಾನು ಒಂದು ಮಾತು ಹೇಳಿದರೆ ಪ್ರಾಯಶಃ ವಿರೋಧಾಭಾಸವಾಗಿ ಕಾಣಲಾರದು ಎಂದುಕೊಂಡಿದ್ದೇನೆ. ಕೇವಲ ನನ್ನೊಬ್ಬನ ಇಚ್ಛೆಗೆ ವಿರುದ್ಧವಾಗಿ ಈ ಮಂಡಲಿಯವರ ಆಹ್ವಾನವನ್ನು ನಾನು ಒಪ್ಪಿಕೊಳ್ಳಲಿಲ್ಲ. ಇದಕ್ಕೆ ನನ್ನ ಅನೇಕ ಆಪ್ತೇಷ್ಟರ ಉಗ್ರ ವಿರೋಧವೇ ಇತ್ತು. ಆದರೂ ಒಪ್ಪಿಕೊಂಡಿದ್ದೆ. ಹಿಂದೂಗಳು ಅಜನ್ಮ ರೋಗಿಗಳೆಂಬುದು ನನಗೆ ಚನ್ನಾಗಿ ಮನನವಾಗಿಯೇ ಇದೆ ಇವೆಲ್ಲ ನನಗೆ ಬಹಳ ಪರಿಚಯವಿದ್ದುದರಿಂದಲೇ ಈ ಜನರಿಂದ ನಾನು ಬಹು ದೂರದಲ್ಲೇ ಇದ್ದು ಬಿಟ್ಟಿದ್ದೆ. ಆದರೆ ಈಗ ಅವರನ್ನು ನಿಂದಿಸಬೇಕೆಂಬುದೂ ನನ್ನ ಉದ್ದೇಶವಲ್ಲ. ನನ್ನ ವಿಚಾರ ಸಮರ್ಥನೆಗೆ, ನನ್ನ ಅಭಿಪ್ರಾಯಗಳ ಅಭಿವ್ಯಕ್ತಿಗೆ ನನ್ನದೇ ಆದಂಥ ವೇದಿಕೆ ಇದೆ. ಇಂಥ ಹೃದಯ ಹಿಂಡುವ ಮನೋವ್ಯಥೆಗಳು ನನ್ನ ಬಾಳಲ್ಲಿ ಸರ್ವೇ ಸಾಮಾನ್ಯ. ಅದು ಹಾಗಿರಲಿ; ಆದರೆ ಈ ನಿಮ್ಮ ಸಮಾಜ ಸುಧಾರಣಾ ಕಾರ್ಯಕ್ಕೆ ಹೆಗಲು ಕೊಟ್ಟು ನಿಂತಿರುವ ನಿಮಗೆ ನಾನು ಅಜನ್ಮ ಆಬಾರಿಯಾಗಿದ್ದೇನೆ.

(ಮುಂದುವರೆಯುವುದು)

# 'ಅಂಬೇಡ್ಕರ್ ಜನಿಸಿದ್ದು ಇಂಗ್ಲೆಂಡಿನಲ್ಲಿ!'

ಡಾ|| ಬಿ.ಆರ್. ಅಂಬೇಡ್ಕರ್ ಜನಿಸಿದ್ದು ಇಂಗ್ಲೆಂಡಿನಲ್ಲಿ!

ಆಶ್ಚರ್ಯಪಡಬೇಕಿಲ್ಲ. ಕಳೆದ ತಿಂಗಳು ಗ್ರಾಮಸೇವಕ ಹುದ್ದೆಗೆ ಸಂದರ್ಶನವಿತ್ತು. ಸಂದರ್ಶನದಲ್ಲಿ ಅಧಿಕಾರಿಯೊಬ್ಬರು ಅಭ್ಯರ್ಥಿಗೆ ಹಾಕಿದ ಪ್ರಶ್ನೆ– "ಅಂಬೇಡ್ಕರ್ ಎಲ್ಲಿ ಹುಟ್ಟಿದ್ದು ?" ಅದಕ್ಕೆ ಅಭ್ಯರ್ಥಿಯು ಹೇಳಿದ್ದು ಮೇಲಿನಂತೆ.

ಇತ್ತೀಚೆಗೆ ಕನ್ನಡ ದೈನಿಕವೊಂದು ಈ ವಿಷಯವನ್ನು ದೊಡ್ಡ ಸುದ್ದಿಯನ್ನಾಗಿ ಮಾಡಿ ಮುಖಪುಟದಲ್ಲಿ ಪ್ರಕಟಿಸಿತ್ತು. —ಆಶ್ಚರ್ಯವೆಂದರೆ ಬಿ.ಆರ್. ಅಂಬೇಡ್ಕರ್ ಶೋಷಿತ ಜನಾಂಗದ ಮಾನವೀಯ ಹಕ್ಕುಗಳಿಗೆ ಹೋರಾಡಿದ ಧೀಮಂತ ವ್ಯಕ್ತಿ; ಮತ್ತು ಭಾರತದ ಸಂವಿಧಾನದ ಕರ್ತೃ. ಇಂತಹ ಮಹಾಪುರುಷರ ಬಗ್ಗೆ ಪ್ರೈಮರಿ ಒಂದನೇ ತರಗತಿಯಿಂದ ಉನ್ನತ ಶಿಕ್ಷಣದವರೆಗೂ ಯಾವುದೇ ಪಠ್ಯ ವಿಷಯವಿಲ್ಲ. ಸಂವಿಧಾನದ ಬಗ್ಗೆ ಬೋಧಿಸುವಾಗಲೂ ಸಹ ಯಾವುದೇ ತರಗತಿಯಲ್ಲೂ ಸಂವಿಧಾನದ ಕರ್ತೃ ಡಾ|| ಅಂಬೇಡ್ಕರ್ ಎಂದು ಯಾವ ಅಧ್ಯಾಪಕನೂ ಹೇಳುವುದಿಲ್ಲ. ಹಾಗೇನಾದರೂ ಹೇಳಬೇಕಿದ್ದರೆ ಆ ಅಧ್ಯಾಪಕ ನಿಮ್ನ ವರ್ಗಕ್ಕೆ ಸೇರಿದ್ದರೆ ಮಾತ್ರ. ಇದು ಅಂಬೇಡ್ಕರ್ ಬಗ್ಗೆ ಕೊಡುವ ನಮ್ಮ ಇಂದಿನ ಶಿಕ್ಷಣದ ವೈಖರಿ.

ಡಾ|| ಅಂಬೇಡ್ಕರ್ ಅವರೇ ಬರೆದ ಅನಿಲೇಷನ್ ಆಫ್ ಕ್ಯಾಸ್ಟ್ ಪುಸ್ತಕವನ್ನು (ಗಾಂಧೀ ಅಂಡ್ ಗಾಂಧೀಸಂ ಪುಸ್ತಕವನ್ನೂ ನಿಷೇಧಿಸುವ ಆಲೋಚನೆ ಸರ್ಕಾರಕ್ಕಿತ್ತು) ಕಳೆದ ವರ್ಷ ರಾಜ್ಯವೊಂದರಲ್ಲಿ ಮಾರಾಟ ಮಾಡುವುದನ್ನು ನಿಷೇಧಿಸಲಾಯಿತು.

ಅಂಬೇಡ್ಕರ್ ಅವರ ವ್ಯಕ್ತಿತ್ವ, ಬದುಕು, ಆಲೋಚನೆ, ವಿಚಾರಗಳನ್ನು ಓದುವ ಸ್ವಾತಂತ್ರ್ಯವಿಲ್ಲದಿರುವಾಗ ಅಂಬೇಡ್ಕರ್ ಜನಿಸಿದ್ದು ಇಂಗ್ಲೆಂಡಿನಲ್ಲಿ ಎಂದು ಸಂದರ್ಶನದಲ್ಲಿ ಹೇಳಿದ್ದು ಆ ಅಭ್ಯರ್ಥಿಯ ತಪ್ಪೆ? ಅಥವಾ ಪ್ರಶ್ನೆ ಕೇಳಿದವರ ತಪ್ಪೆ? ಅಥವಾ ಇಂದಿನ ಶಿಕ್ಷಣ ಪದ್ಧತಿಯ ತಪ್ಪೆ ? ಅಥವಾ .....?

— ಶೀಲಾ, ಮಳವಳ್ಳಿ

.........

ಈಗಾಗಲೇ ಅಭಿವೃದ್ಧಿ ಸಾಧಿಸಿರುವ ಅಗ್ರ ಜಾತಿಗಳವರು ಜಾತೀಯತೆಗೆ ಅಂಟಿಕೊಂಡಿದ್ದರೆ ಅದು ಮಹಾ ಪಾಪ, ಅಕ್ಷಮ್ಯ,

-ದಲಿತ ಕೈಪಿಡಿ




# ಅಸ್ಪೃಶ್ಯತೆ ನಿನ್ನ ಮೂಲ ಎಲ್ಲಿ ?

ಅಸ್ಪೃಶ್ಯತೆ ಜಾತೀಯತೆ ಇಂಥ ನಾತಗಳನ್ನು ಈ ಭೂಮಿಯಿಂದ ಓಡಿಸುವತ್ತ ಅನೇಕ ಪ್ರಯತ್ನಗಳು ನಡೆಯುತ್ತ ಬರುತ್ತಲಿವೆ. ಆದಾಗ್ಯೂ ಇವು ಜಗ್ಗದೆ ದೇಹದಂತೆ ಸ್ಪಷ್ಟರೂಪದಲ್ಲೋ, ಮನಸ್ಸಿನಂತೆ ಅಸ್ಪಷ್ಟ ರೂಪದಲ್ಲೋ ನಮ್ಮ ಒಡನಾಡಿಕೊಂಡು ಬರುತ್ತಿವೆ. ಇದಕ್ಕೆ ಕಾರಣ - ಒಂದಲ್ಲ, ನೂರು. ಅವುಗಳಲ್ಲೊಂದು ಬೇತಾಳ ಕಥೆಯಂತಿವೆ.

ಯಥಾಪ್ರಕಾರ ನಿಮಗೆಲ್ಲ ಗೊತ್ತಿರುವಂತೆ ರಾಜ ತ್ರಿವಿಕ್ರಮನು ಬೇತಾಳವನ್ನು ತನ್ನ ಹೆಗಲಿಗೇರಿಸಿಕೊಂಡು ನಡೆದಾಗ ರಾಜನ ಬೇಸರ ಕಳೆಯಲು ಬೇತಾಳ ಯಥಾ ಪ್ರಕಾರ ಒಂದು ಕಥೆ ಹೇಳುವುದು. ಆ ಕಥೆಯು ಏನೆಂದರೆ– ನಂಜನಗೂಡು ತಾಲ್ಲೂಕಿನಲ್ಲಿ ಚಂದ್ರವಾಡಿ ಎಂಬ ಗ್ರಾಮವಿದೆ. ಆ ಗ್ರಾಮದಲ್ಲೊಂದು ಸರ್ಕಾರಿ ಅಸ್ಪತ್ರೆ ಇದೆ. ಆ ಅಸ್ಪತ್ರೆಗೆ ಜವಾನ ಹರಿಜನ ಪಂಗಡಕ್ಕೆ ಸೇರಿದವನು. ಆ ಊರಲ್ಲಿ ಮತ್ತಾರು ವಾಸವಿಲ್ಲದ ಪ್ರಯುಕ್ತ ಆ ಹರಿಜನ ಜವಾನನಿಗೆ ಮನೆ ಸಿಗದೆ ಅನೇಕ ವರ್ಷಗಳಿಂದಲೂ ಆ ಊರಲ್ಲಿ ಡ್ಯೂಟಿ ಮಾಡುತ್ತ ಇದುವರೆಗೂ ಬಂದಿರುವನು. ಈ ಬಗ್ಗೆ ಆತ ಯಾರಾರಿಗೊ ಬರೆದು ಕೇಳಿಕೊಂಡಿದ್ದರೂ ಏನೂ ಅಗಿಲ್ಲ. ಇಂಥವೆಲ್ಲ ಸರ್ವೆ ಸಾಮಾನ್ಯವಲ್ಲ ! ಇದರಲ್ಲೇನು ಮಹಾ ! ಅನ್ನಬೇಡಿ. ಇದ್ದೀತು. ಆ ಊರಿಗೆ ಕೊಡಗಿನ ಕಡೆಯ ತುಸು ಮೇಲು ಜಾತಿಯ ನರ್ಸು ವರ್ಗವಾಗಿ ಬಂದಳು. ಆಕೆಯು ಆ ಊರಿಗೆ ಬಂದ ಮೊದಲಲ್ಲಿ ಯಾವ ಜಾತಿ ಬೇಧವನ್ನೂ ಮಾಡದೆ ಆ ಹರಿಜನ ಜವಾನನು ಮಾಡಿಕೊಟ್ಟ ತಿಂಡಿ ತಿನಿಸು ಮುಂತಾಗಿ ತಿನ್ನುತ್ತಿದ್ದಳು. ಹಾಗೆಯೇ ನರ್ಸ್ ಜೊತೆಯಲ್ಲಿ ಬಂದಿದ್ದ ಒಂದು ಪುಟ್ಟ ಹುಡುಗನೂ ತಿನ್ನುತ್ತಿದ್ದನು.

ಇವೆಲ್ಲ ಆಗಿ ಸ್ವಲ್ಪ ದಿನಗಳು ಕಳೆದ ಮೇಲೆ ನರ್ಸು ತುಸು ಮೇಲು ಜಾತಿಯವಳಾದ್ದರಿಂದ ಆಕೆಗೆ ಆ ಊರ ಒಳಗೆ ಮನೆ ಸಿಕ್ಕಿತು. ಮನೆ ಸಿಕ್ಕಿದ ಮೇಲೂ ಆ ನರ್ಸಿನ ಜೊತೆಯಲ್ಲಿ ಬಂದಿದ್ದ ಹುಡುಗ ಯಥಾ ಪ್ರಕಾರ ಆ ಹರಿಜನ ಜವಾನನ ಬಳಿಗೆ ಬಂದು ಮಾತಾಡುವುದು ಯಥಾ ಪ್ರಕಾರ ತಿಂಡಿತಿನಿಸು ಕೊಟ್ಟರೆ ತಿನ್ನುವುದು ಮಾಡುತ್ತಿತ್ತು. ಒಂದು ದಿನ ಇದು ಆ ಊರಿನಲ್ಲಿದ್ದ ಉನ್ನತ ಜಾತಿಯವನಾದ ದನದ ಇನ್ಸಪೆಕ್ಟರನ ಕಣ್ಣಿಗೆ ಬಿತ್ತು. ದನದ ಇನ್ಸಪೆಕ್ಟರ್ ಆಗುವುದೂ ಅಕ್ಷರಸ್ಥ ವಿದ್ಯಾವಂತನೇ ತಾನೆ? ಅವನು ಏನು ಮಾಡಿದ ಅಂದರೆ ಆ ನರ್ಸನ್ನು ಕರೆಸಿ "ಏನಮ್ಮಾ ನಿಮ್ಮ ಹುಡುಗ ಆ ಹೊಲೆಮಾದಿಗರ ಮನೆಲೆಲ್ಲ ತಿನ್ನುತ್ತಾನಲ್ಲಾ ! ಸರಿಯಾ" ಎಂದಷ್ಟೇ ಪ್ರಶ್ನೆ ಮುಂದಿಟ್ಟು ಉಪಸ್ಥಿತನಾದ. ಈ ಮಾತು ಕೇಳಿದ ಆ ನರ್ಸ್ ಕುಪಿತಳಾಗಿ ಅಲ್ಲಿಗೇನೆ ತಮ್ಮ ಹುಡುಗನನ್ನು ಕರೆಸಿ "ಏನೋ, ಹೊಲೆಮಾದಿಗರ ಮನೆಲೆಲ್ಲ ತಿಂತಿಯಾ ?" ಎಂದು ರಕ್ತ ಬರುವವರೆಗೂ ಹೊಡೆದಳು. ಇದಿಷ್ಟು ಕಥೆ. ಕಥೆಯಲ್ಲ ನಡೆದದ್ದು.

ಈಗ ಪ್ರಶ್ನೆ : (1) ಮೊದಲು ಹೊಲೆ ಮಾದಿಗರ ಕೈಯ ತಿಂಡಿ ತಿಂದಿದ್ದ ನರ್ಸ್ ಯಾಕೆ ಆ ಮೇಲೆ ಕುಪಿತಗೊಂಡಳು ? (2) ಇಷ್ಟೆಲ್ಲ ಇಕ್ಮತ್ ಮಾಡಿ ಉಪಸ್ಥಿತನಾದ ಆ ವಿದ್ಯಾವಂತ ಉನ್ನತ ಜಾತಿಯ ದನದ ಇನ್ಸ್ಪೆಕ್ಟರಿಗೆ ಇದರಿಂದ ಏನು ಲಾಭ? ಎಲೈ ತ್ರಿವಿಕ್ರಮನೇ ಈ ಮೇಲಿನ ಪ್ರಶ್ನೆಗಳಿಗೆ ನೀನು ತಿಳಿದೂ ತಿಳಿದೂ ಉತ್ತರ ಹೇಳದಿದ್ದರೆ ನಿನ್ನ ತಲೆ ಸಿಡಿದು ಸಹಸ್ರ ಚೂರಾಗುತ್ತದೆ ಎಂದು ಕೇಳಿ ಬೇತಾಳ ಮೌನವಾಯಿತು. ಅನೇಕಾನೇಕ ಪ್ರಶ್ನೆಗಳಿಗೆ ಲೀಲಾಜಾಲವಾಗಿ ಉತ್ತರ ಕೊಟ್ಟಿದ್ದ ತ್ರಿವಿಕ್ರಮ ಭೂಪನಿಗೆ ಈ ಬೇತಾಳ ಪ್ರಶ್ನೆಗಳು ಪೀಕಲಾಟಕ್ಕೆ ಇಟ್ಟುಕೊಂಡಿತು. ಕೊನೆಗೆ ರಾಜ ವಿಕ್ರಮನು ಚಿಂತಿಸಿ ಹೇಳಿದ್ದೇನೆಂದರೆ– ಮೊದಲನೆಯದಾಗಿ, ನರ್ಸ್ ಮೊದಲು ಹೊಲೆಮಾದಿಗರ ಮನೆಯಲ್ಲಿ ತಿಂದಿದ್ದರೂ ಆಮೇಲೆ ಆ ಕಾರಣಕ್ಕಾಗಿ ಕುಪಿತಗೊಳ್ಳಲು ಕಾರಣ– ಅವಳ ಪ್ರತಿಷ್ಠೆ ಪ್ರಶ್ನೆ. ಅವಳು ಕುಪಿತಗೊಳ್ಳದಿದ್ದರೆ ಅವಳನ್ನೇ ಉಳಿದವರು ಕೀಳಾಗಿ ಕಾಣುವ ಸಂಭವ ಇತ್ತು. ಅವಳ ಈ ಭಯವೇ ಅವಳ ವರ್ತನೆಗೆ ಕಾರಣ. ಎರಡನೆ ಪ್ರಶ್ನೆ: ದನದ ಇನ್ಸ್ಪೆಕ್ಟರನಿಗೆ ಏನು ಲಾಭ? ಎಂದು. ಇಂಥವುಗಳಿಂದೆಲ್ಲ ಲಾಭ ಹೆಚ್ಚು ಆಗುವುದು ದನದ ಇನ್ಸಪೆಕ್ಟರ್‌ನಂಥವರಿಗೇ. ಯಾಕೆಂದರೆ ದನದ ಇನ್ಸಪೆಕ್ಟರ್ ಉನ್ನತ ಜಾತಿಯವನು. ಅಂದರೆ ಜಾತಿ ವಿಂಗಡಣೆಯ ಹಂತದಲ್ಲಿ ಮೇಲೆ ನಿಂತಿರುವವನು. ಸಾಮಾಜಿಕವಾಗಿ ಮೇಲು ಕೀಳು ಕಿತ್ತಾಡಿ ಯಾತಲ್ಲೆ ಆದರೂ ಅದರಿಂದ ಸಾಮಾಜಿಕ ಪ್ರತಿಷ್ಠೆಯ ಲಾಭ ಹೆಚ್ಚು ದಕ್ಕುವುದು ಮೊದಲು ಬ್ರಾಹ್ಮಣನಿಗೆ ಆಮೇಲೆ ಕ್ಷತ್ರಿಯನಿಗೆ– ಹೀಗೆ. ಉನ್ನತ ಜಾತಿಯ ದನದ ಡಾಕ್ಟರನು ತುಸು ಮೇಲು ಜಾತಿಯ ನರ್ಸ್‌ಗೆ "ನೀನು ಹೊಲೆಮಾದಿಗರಿಗಿಂತ ಮೇಲು" ಅಂದರೆ ಅಲ್ಲೆ "ಎಲೈ ನರ್ಸಳೇ ನಿನಗಿಂತಲೂ ನಾನು ಮೇಲು" ಎಂದೂ ಅಲ್ಲೆ ಅರ್ಥವಾಗುತ್ತದೆ. ಈ ನರ್ಸ್‌ನಂಥ ತುಸು ಮೇಲು ಜಾತಿಯವರು ತಾವು ಹೊಲೆಮಾದಿಗರಿಗಿಂತ ಮೇಲು ಎಂದುಕೊಂಡದ್ದಾದರೆ ಬ್ರಾಹ್ಮಣ ಕ್ಷತ್ರಿಯ ಇತ್ಯಾದಿಗಳಿಗಿಂತ ತಾವು ಕೀಳು ಎಂದುಕೊಂಡಂತೂ ಆಗುತ್ತದೆ. ಸಣ್ಣ ಪುಟ್ಟ ಜಾತಿಗಳಲ್ಲಿ ಪ್ರತಿಷ್ಠೆಗಾಗಿ ತೀವ್ರತರ ಹೋರಾಟ ನಡೆದರೂ ಇದರ ಫಲ ದಕ್ಕುವುದು ಉನ್ನತ ಜಾತಿಯವರಿಗೇ. ಹೇಗೆ ಹೊಲೆಮಾದಿಗರ ಒಳಗೊಳಗೆ ಪ್ರತಿಷ್ಠೆಗಾಗಿ ಜಗಳವಾದರೆ ಈ ಇಬ್ಬರಲ್ಲೂ ಮೇಲು ಕೀಳು ಏನೂ ಆಗದೆ ಹೇಗೆ ಇವರು ಸಾಮಾಜಿಕವಾಗಿ ಇದ್ದಲ್ಲೇ ಇದ್ದು ತಮ್ಮ ಜಗಳದಿಂದಾಗಿ ಉನ್ನತ ಜಾತಿಯವರ ಪ್ರತಿಷ್ಠೆಯನ್ನು ಎತ್ತಿಹಿಡಿಯುವರೊ ಹಾಗೆ ಆ ದನದ ಇನ್ಸ್ಪೆಕ್ಟರನು ತನ್ನ ಉನ್ನತ ಜಾತಿಯ ಪ್ರತಿಷ್ಠೆಯನ್ನು ಉಳಿಸಿಕೊಳ್ಳಲು ಇಕ್ಮತ್ ಮಾಡಿದ ಎಂದ ತ್ರಿವಿಕ್ರಮನ ಈ ಉತ್ತರ ಕೇಳಿದ್ದೇ ತಡ ಬೇತಾಳ ಅರೆಕ್ಷಣವೂ ನಿಲ್ಲದೆ ಒಡಿ ಹೋಯಿತು.

ಎಲೈ ಹೊಲೆಮಾದಿಗರೆ ಹಾಗೂ ಜಾತಿಯಿಂದ ಸಂಕುಚಿತಗೊಂಡವರೇ ಈ ಪ್ರಶ್ನೆ ಇರುವುದು ರಾಜತ್ರಿವಿಕ್ರಮನಿಗಲ್ಲ-ನಿಮಗೇ. ನೀವುಗಳು ಇತ್ತ ಗಮನ ಹರಿಸದಿದ್ದರೆ ತಲೆ ಸಹಸ್ರ ಚೂರಾಗುವುದು ರಾಜನಿಗಲ್ಲ- ನಿಮಗೇ.

–ಕಿಡಿಗೇಡಿ

# ನನ್ನ ಜನಗಳು

ಕಬ್ಬದಂತ ಬಂಜ್ರು ಭೂಮಿನ
ಉತ್ತು ಬಿತ್ತು ಬೆಳಿ ತಗ್ದು
ವಾಡೆ, ಮೂಡೆ, ಕಣ್ಜ ತುಂಬಿ
ತಲ್ಬಾಕ್ಲಗೆ ಶರ್‌ಗೊಡ್ಕಂಡು
ನಿಂತ್ಕಣಕೆ.
ತಲೆ ಮಾರ್ನಗೆ ಗುತ್ಗೆ ಒಪ್ಸಿ
ಅನ್ನಂಗಿಲ್ಲ, ಅನುಭೌಸಂಗಿಲ್ಲ,
ಕುತ್ಗೆ ಹಿಡ್ಕಂಡು 'ಗತ್ತು' ಇಲ್ದಂಗೆ–
ಸತ್ತೋದೋರಂಗೆ, ಬದ್ಕಿ ಬಾಳಿ ....
ಕಡ್ಗೊಂಡ್ಸಲ ಸತ್ತೋದೋರು.
ಬಂಡೆಯಂತ ಭೂಮಿನ
ಅಗ್ದು ಅಗ್ದು ವತ್ತು ವತ್ತು
ಕುಡ್ಯೋನೀರ್ನ ಬಾವಿ ತಗ್ದು
ಕುಡ್ಯೋ ನೀರ್ಗೆ ಮಡ್ಕೆ ಗಡ್ಗೆ,
ಹಿಡ್ಕಂಡು ಸಾಲಾಗಿ ನಿಂತೋರು
'ಬಾಯಾರಿ ನಾಲ್ಗೆ ವಣ್ಗೋದ್ರುನೆ'
ಮಾತಾಡ್ದಂಗೆ ನಿಂತೋರು
ಕಡ್ಗೊಂಡ್ಸಲ ನೀರಿಲ್ದಂಗೆ
'ನಾಲ್ಗೆ ಕಿತ್ಕಂಡು ಸತ್ತೋರು'
'ಸೂಳೆಮಕ್ಳು ಬದ್ಕಾಕೆ'
ಸುಲ್ದು ಸುಲ್ದು ತಿಂದ್ರುನೆ
ದುಡ್ದು ದುಡ್ದು, ಕರ್ಗಿ ಕರ್ಗಿ,
ಕಡ್ಗೊಂಡ್ಸಲ ಸದ್ದಿಲ್ದಂಗೆ
ಸತೋದೋರು ...........
ನನ್ನ ಜನಗಳು

–ಕೆ.ಟಿ.ಸಿದ್ದಯ್ಯ.

---

(ಮೊದಲ ಪುಟದಿಂದ)

ಈ ಮೇಲ್ಕಂಡ ವಿಷಯವು ಸತ್ಯದಿಂದ ಕೂಡಿರುತ್ತದೆ. ಈ ಹುಡುಗನ ಶವ ಪರೀಕ್ಷೆ ನಡೆಸೀ ರಾಮನಗರಂ ತಹಶೀಲ್‌ದಾರ್ ಮತ್ತು ಅಸಿಸ್ಟೆಂಟ್ ಕಮಿಷನರ್ ಸಾಹೇಬರುಗಳ ರಿಪೋರ್ಟ್ ತರಿಸಿಕೊಂಡು ನಮಗೆ ನ್ಯಾಯ ದೊರಕಿಸಿಕೊಡಿ. ದಯವಿಟ್ಟು ಎಲ್ಲಾ ವಿಷಯವನ್ನು ಕೂಲಂಕುಷವಾಗಿ ತನಿಖೆ ನಡೆಯಿಸಿ ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಸನ್ನಿಧಿಯಲ್ಲಿ ಮನವಿ ಮಾಡಿಕೊಳ್ಳುತ್ತೇನೆ ಸ್ವಾಮಿ.

ತಮ್ಮ ವಿಧೇಯರು.

(ಸಹಿ)

1. ಸಿದ್ದಮ್ಮ
2. ರಾಮಯ್ಯ
3. ಬೋರಯ್ಯ

ಸಂಪಾದಕ : ಇಂದೂಧರ ಹೊನ್ನಾಪುರ ಜೊತೆಗೆ : ರಾಮದೇವ ರಾಕೆ ಶಿವಾಜಿ ಗಣೇಶನ್ ಶಿವಮಲ್ಲ ದೇವನೂರು ಪ್ರಕಾಶಕ : ಗೋವಿಂದಯ್ಯ
ಮುದ್ರಣ : ಆಂದೋಲನ ಮುದ್ರಣ, ಮೈಸೂರು-9 ವಿಳಾಸ : 2649/2, ಬಿ.ಬಿ. ಅಂಡ್ ಸನ್ಸ್ ರೋಡ ಕೆ. ಜಿ. ಕೊಪ್ಪಲು, ಮೈಸೂರ್-9